# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಮೇ ೨೯, ೨೦೧೪ (ಜ್ಯೇಷ್ಠ ೮, ಶಕ ವರ್ಷ ೧೯೩೬)<br>Bangalore, Thursday, May 29, 2014 (Jyeishta 8, Shaka Varsha 1936) | ಸಂಚಿಕೆ ೨೨<br>Issue 22 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಒಇ 234 ಪಿಪಿಇ 2010, ಬೆಂಗಳೂರು, ದಿನಾಂಕ: 15ನೇ ಏಪ್ರಿಲ್, 2014**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶನಾಲಯದಲ್ಲಿ 3ನೇ ಉಪ ನಿರ್ದೇಶಕರ ಹುದ್ದೆಗಳು ಇದ್ದು, ಸದರಿ ಹುದ್ದೆಗಳಿಗೆ ಈ ಕೆಳಕಂಡಂತೆ ಕಾರ್ಯ ಹಂಚಿಕೆಯನ್ನು ಮಾಡಿದೆ.

| | |
|---|---|
| ಅಭಿಯೋಗ ಉಪ ನಿರ್ದೇಶಕರು (ಆಡಳಿತ) | ಆಡಳಿತ ವಿಷಯಗಳು–ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶನಾಲಯದಲ್ಲಿನ ಅಧಿಕಾರಿ/ಸಿಬ್ಬಂದಿಗಳಿಗೆ ಸಂಬಂಧಿಸಿದಂತೆ ಆಡಳಿತ ವಿಷಯಗಳು |
| ಅಭಿಯೋಗ ಉಪ ನಿರ್ದೇಶಕರು–ವ್ಯಾಜ್ಯ–1 | ಮಂಗಳೂರು, ಮೈಸೂರು ಮತ್ತು ಬೆಂಗಳೂರು ವಿಭಾಗಕ್ಕೆ ಸಂಬಂಧಿಸಿದ ಪ್ರಕರಣಗಳಲ್ಲಿ ಅಭಿಪ್ರಾಯ ನೀಡುವುದು |
| ಅಭಿಯೋಗ ಉಪ ನಿರ್ದೇಶಕರು–ವ್ಯಾಜ್ಯ–2 | ಬೆಳಗಾವಿ, ಗುಲ್ಬರ್ಗಾ ಮತ್ತು ದಾವಣಗೆರೆ ವಿಭಾಗಕ್ಕೆ ಸಂಬಂಧಿಸಿದ ಪ್ರಕರಣಗಳಲ್ಲಿ ಅಭಿಪ್ರಾಯ ನೀಡುವುದು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ದೇವೆಂದ್ರಪ್ಪ ಕಟ್ಟಿಮನಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

**P.R. 281**
**SC - 100**

## FORM NO.155

**[See rule 329]**

**[Members/Creditors Voluntary Winding-up]**

**Name of Company** : Xindia international Cements Limited
**Type of Winding Up** : Members Voluntary Winding Up

### Notice convening final meeting

Notice is hereby given in pursuance of section 497 that a final meeting of the members of the above-named company will be held at Registered Office of the Company on the 13th day of June 2014 at 11 AM for the purpose of having an account laid before them showing the manner in which the winding-up has been conducted and the property of the company disposed of and of hearing any explanation that may be given by the liquidator, the manner in which the books, accounts and documents of the company and of the liquidator shall be disposed of.

Date: 10th May 2014

For XINDIA INTERNATIONAL CEMENTS LIMITED (in Liquidation)
**MADHWESH. K**
LIQUIDATOR

**P.D. 37**
**SC - 5**

**FORM No. 151**

[See rule 315] COMPANIES ACT. 1956

Members Voluntary Winding-up

Notice of appointment of liquidator pursuant to section 516 in Official Gazette

| | | |
|---|---|---|
| Name of company | : | NEXPLICIT INFOTECH INDIA PRIVATE LIMITED (In VoL Liquidation) |
| Nature of business | : | Software |
| Address of Registered Office | : | SJR I-PARK.PLOT No. 13. 14. 15. EPIP INDUSTRIAL AREA. WHITEFIELD. BANGALORE- 560066 |
| Name(s) and address (es) of Liquidator[s] | : | CS Naman Joshi No. 12. 1 st Floor. 72nd Cross. 5th Block. Rajajinagar. Bangalore - 10 |
| Date of appointment | : | 09.04.2014 |
| By Whom appointed | : | MEMBERS |

Dated 22.04.2014

For Nexplict infortech India Pvt. Ltd., (in. Liquidation)

**P.D. 31**
**SC - 5**

**Name : NAMAN JOSHI**
Designation : Liquidator.

**FORM No. 155**

(See Rule 329)

Members' Voluntary winding-up

Name of the Company: Safeco Offshore Sourcing Private limited

Registered Office: 1st Floor, Pine Valley, Embassy Golf- Links Business Park, Bangalore- 560071

**Notice Convening Final Meeting**

Notice is hereby given in pursuance of Section 497 of the Companies Act, 1956 that a General Meeting of the members of the above named Company will held on 27-06-2014 at 11.00 AM at 1st Floor, Pine Valley, Embassy Golf- Links Business Park, Bangalore- 560071 for the purpose of having an account laid before them showing the manner in which the winding-up has been conducted and the property of the company disposed off, and of hearing any explanation that may be given by the liquidator, and also of determining by a special resolution of the company the manner in which the books, accounts and documents of the Company and of the liquidator shall be disposed off.

Dated this 22-04-2014

**P.D. 32**
**SC - 5**

For Safeco Offshore Sourcing Private Limited,
**Natesh K.**
liquidator

## OFFICE OF THE CITY CIVIL COURT, BANGALORE

### NOTIFICATION

### No. ADM-I (E) 174/2014, Bangalore, January 21,2014.

Smt T. Narendra, Asst. Registrar of City Civil Court, Bangalore is granted one day earned leave on 11.12.2013, on personal ground.

Sri R. Gurumurthy, Asst. Registrar, City Civil Court, Bangalore is placed in additional charge of Smt T. Narendra, Asst. Registrar, City Civil Court, Bangalore, during the above leave period.

Smt T. Narendra, Asst. Registrar, City Civil Court, Bangalore would have continued in the same post, but for proceedings on leave.

BY ORDER OF THE PRL.CITY CIVIL & SESSIONS JUDGE, BANGALORE

**P.R. 252**

Registrar
City Civil court, Bangalore.

## OFFICE OF THE DISTRICT & SESSIONS JUDGE, MYSORE

### NOTIFICATION

### No.ADMN/A/3461/2014, dated 04/07.03.2014.

Sri. T.C. Nagaraju, Chief Administrative Officer, District and Sessions Court, Mysore, is granted Earned Leave for 11 days from 03.01.2014 to 13.01.2014 (b.d.i.) and permitted to avail General Holidays on 14.01.2014 and 15.01.2014 and also to be away from the Head Quarters, after the office hours on 02.01.2014, till commencement of office hours on 16.01.2014, on domestic affairs.

Sri. Parameshmurthy, Sheristedar, District and Sessions Court, Mysore, is placed in-charge of the Chief Administrative Officer, during the leave period.

**K.S. MUDAGAL**
District & Sessions Judge, Mysore

**P.R. 253**

## ವಾಣಿಜ್ಯ ತೆರಿಗೆಗಳ ಇಲಾಖೆ

## ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಎಲ್.ವಿ.ಒ.–020), ಬೆಂಗಳೂರು, ರವರ ನಡವಳಿಗಳು

**ಪ್ರಸ್ತುತ** : ಟಿ.ಆರ್. ಕೃಷ್ಣಕುಮಾರ್,
ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಎಲ್.ವಿ.ಓ.–020, ಬೆಂಗಳೂರು

**ವಿಷಯ** : ಮೆ॥ ದಿ ಹಿಂದು (ಕಸ್ತೂರಿ & ಸನ್ಸ್ ಲಿ)., ಟಿನ್ 29640320051 'ಸಿ' ನಮೂನೆ ಕಳೆದುಹೋಗಿರುವ ಬಗ್ಗೆ.

**ಉಲ್ಲೇಖ** :
1. ವರ್ತಕರ ಮನವಿ ಪತ್ರ ದಿನಾಂಕ : 01–07–2013.
2. ಈ ಕಛೇರಿಯ ಪತ್ರ ಸಂಖ್ಯೆ : ವಾ.ತೆ.ಸ.ಆ.ಎಲ್.ವಿ.ಓ–020/1196/2013–14, ದಿನಾಂಕ : 24–07–2013.
3. ವಾತೆಜಂಆ (ಆ) ಮೌ.ತೆ.ವಿ.–1/ಇತರೆ/ಟಿ–1421/2013–14, ದಿನಾಂಕ : 30–08–2013.
4. ಕೇಂದ್ರ ಮಾರಾಟಾ ತೆರಿಗೆ ನಿಯಮಾವಳಿಗಳು 1957 ನಿಯಮ 12(2)

**ಪ್ರಸ್ತಾವನೆ :**

ಮೆ॥ ದಿ ಹಿಂದು (ಕಸ್ತೂರಿ & ಸನ್ಸ್ ಲಿ)., ಬೆಂಗಳೂರು, ಇವರು ಉಲ್ಲೇಖ (1)ರ ಪತ್ರದಲ್ಲಿ ಸದರಿಯವರು ಮೆ॥ ಸ್ಟೋವೆಕ್ ಇಂಡಸ್ಟ್ರೀಸ್ ಲಿ., ಅಹಮದಬಾದ್, ಇವರಿಗೆ ಪೂರ್ಣವಾಗಿ ಭರ್ತಿ ಮಾಡಿ ನೀಡಲಾಗಿದ್ದ 'ಸಿ' ನಮೂನೆ ಮೂಲ ಪತ್ರ ಸಂಖ್ಯೆ : TCK-R 2929568, TCK-R 2929569 ಮತ್ತು TCK-R 2929570 ಕಳೆದುಹೋಗಿರುವುದಕ್ಕೆ ಪೂರಕವಾಗಿ ಕೆಳಕಂಡ ದಾಖಲೆಗಳು/ಪ್ರತಿಯನ್ನು ಸಲ್ಲಿಸಿರುತ್ತಾರೆ.

1. ಮೆ॥ ಸ್ಟೋವೆಕ್ ಇಂಡಸ್ಟ್ರೀಸ್ ಲಿ., ಅಹಮದಬಾದ್, ಇವರು ಗುಜರಾತಿನ ಇಂಗ್ಲೀಷ್ ದಿನ ಪತ್ರಿಕೆ ಫ್ರೀ ಪ್ರೆಸ್ ಗುಜರಾತ್ ದಿನಾಂಕ : 18–03–2013ರಂದು ಪ್ರಕಟಿಸಿದ್ದ ಹಾಗೂ ಗುಜರಾತಿ ದಿನಪತ್ರಿಕೆ ಲೋಕಮಿತ್ರದಲ್ಲಿ ಪ್ರಕಟಿಸಿರುವ ಪ್ರತಿ.
2. ಪೊಲೀಸ್ ಉಪ ನಿರೀಕ್ಷಕರು, ವಾಟ್‌ವಾ ಪೊಲೀಸ್ ಠಾಣೆ, ಅಹಮದಬಾದ್ ಇವರಲ್ಲಿ ದಾಖಲಿಸಿರುವ ದೂರಿನ ಪ್ರತಿ.
3. ಸದರಿ 'ಸಿ' ನಮೂನೆಗಳಿಗೆ ಸಂಬಂಧಿಸಿದಂತೆ ಮೆ॥ ಸ್ಟೋವೆಕ್ ಇಂಡಸ್ಟ್ರೀಸ್ ಲಿ., ಇವರ Indemndity Bond.
4. ಮೆ॥ ದಿ ಹಿಂದು (ಕಸ್ತೂರಿ & ಸನ್ಸ್ ಲಿ)., ಬೆಂಗಳೂರು, ಇವರು ಈ ಪ್ರಕರಣದಲ್ಲಿ ತೆರಿಗೆ ಭಾದ್ಯತೆ ಬಂದ ಪಕ್ಷದಲ್ಲಿ ಭರಿಸುವುದಾಗಿ ಪ್ರಮಾಣೀಕರಿಸಿ ಸಲ್ಲಿಸಿರುವ Indemndity Bond.

ಮೇಲೆ ತಿಳಿಸಲಾದ ಶಾಸನಬದ್ಧ ನಮೂನೆಗಳನ್ನು ಈ ಕಛೇರಿಯಿಂದ ನೀಡಲಾಗಿದೆ. ಈ ಬಗ್ಗೆ ಉಲ್ಲೇಖ (2)ರಂತೆ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು, (ಆಡಳಿತ) ಮೌ.ತೆ.ವಿ–1, ಬೆಂಗಳೂರು ಕಛೇರಿಗೆ ಪತ್ರ ಬರೆಯಲಾಗಿ, ಉಲ್ಲೇಖ (3)ರ ಪತ್ರದಲ್ಲಿನಂತೆ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ : ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಸ್ಥ.ಮೌ.ತೆ.–020/ಟಿ 32/2014–15, ದಿನಾಂಕ : 08–04–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕೇಂದ್ರ ಮಾರಾಟ ತೆರಿಗೆ ನಿಯಮಾವಳಿಗಳು 1956 ನಿಯಮ 12(2)ರಂತೆ ಮೆ॥ ದಿ ಹಿಂದು (ಕಸ್ತೂರಿ & ಸನ್ಸ್ ಲಿ)., ಬೆಂಗಳೂರು., ಇವರಿಗೆ ಈ ಕಛೇರಿಯಿಂದ ನೀಡಲಾಗಿದ್ದ 'ಸಿ' ನಮೂನೆ ಸಂಖ್ಯೆಗಳು TCK-R 2929568, TCK-R 2929569 ಮತ್ತು TCK-R 2929570 ಗಳನ್ನು ರದ್ದುಗೊಳಿಸಿ ಆದೇಶಿಸಲಾಗಿದೆ.

**ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು**
ಎಲ್.ವಿ.ಓ.–020, ಬೆಂಗಳೂರು–560001.

**P.R. 254**
**SC-10**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಜಿಲ್ಲಾಡಳಿತ ಭವನ, 2ನೇ ಮಹಡಿ, ಕೊಠಡಿ ಸಂ. 52, 53, ಕರೂರು ಕೈಗಾರಿಕಾ ಪ್ರದೇಶ, ಪಿ.ಬಿ. ರಸ್ತೆ, ದಾವಣಗೆರೆ, ಇವರ ಕಾರ್ಯಾಲಯ.

**ನಂ. ಡಿಆರ್/ಡಿವಿಜಿ/ಸಿಆರ್–87/2013–14, ದಿನಾಂಕ : 28–02–2014.**

**ವಿಷಯ :** ಸ್ಥಗಿತಗೊಂಡಿರುವ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ತೆಂಗಿನ ನಾರನ್ನು ಮತ್ತು ನಾರಿನ ಸರಕುಗಳನ್ನು ಉತ್ಪಾದಿಸುವ ಮತ್ತು ಮಾರಾಟ ಮಾಡುವ ಕೈಗಾರಿಕಾ ಸಹಕಾರ ಸಂಘ ನಿ., ಹೊದಿಗೆರೆ ಚನ್ನಗಿರಿ ತಾ. ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 959 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ಸಂಖ್ಯೆ : ಸನಿ31/ಸಮಾಪನೆ/ಸಿಆರ್13/2013–14, ದಿನಾಂಕ : 15–02–2014.
2. ಈ ಕಛೇರಿಯ ಸಮಸಂಖ್ಯೆ : ನೋಟೀಸ್ ನ ದಿನಾಂಕ : 19–12–2013.

**ಪ್ರಸ್ತಾವನೆ :**

ಪ್ರಸ್ತತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಕಳೆದ ಹಲವಾರು ವರ್ಷಗಳಿಂದ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಪತ್ರದಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಹೊಂದಿದ್ದು, ಇದರ ಕಾರ್ಯಚಟುವಟಿಕೆಗಳು ಕಳೆದ 3–4 ವರ್ಷಗಳಿಂದ ಸ್ಥಗಿತಗೊಂಡಿರುತ್ತವೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಸಮಿತಿ ಸಭೆ ನಡೆಸಿರುವುದಿಲ್ಲ. ಸಂಘದ ಲೆಕ್ಕಪರಿಶೋಧನೆಯಾಗಿರುವುದಿಲ್ಲ. ಹಾಗೂ

ಬೈಲಾ ರೀತ್ಯಾ ಕಾರ್ಯನಿರ್ವಹಿಸುತ್ತಿಲ್ಲ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಡಳಿತ ಸಮಿತಿ ಸದಸ್ಯರು ಆಸಕ್ತಿ ಹೊಂದಿರುವುದಿಲ್ಲ. ಉಲ್ಲೇಖ (2)ರ ಪತ್ರದಂತೆ ಈ ಕಛೇರಿಯಿಂದ ಸಂಘದ ಆಡಳಿತ ಮಂಡಳಿಯ ಸದಸ್ಯರಿಗೆ ನೀಡಿದ ಕಾರಣ ಕೇಳಿ ತಿಳುವಳಿಗೆ ತಹಲ್‌ವರೆವಿಗೂ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಅದುದರಿಂದ ಈ ಸಂಘದಿಂದ ಸದಸ್ಯರಿಗೆ ಯಾವ ಪ್ರಯೋಜನವೂ ದೊರೆಯುತ್ತಿಲ್ಲ. ಕಾರಣ ಈ ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂ. ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–87/2013–14, ದಿನಾಂಕ : 28–02–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಒ/139/ಸಿಎಲ್‌ಎಂ/2010, ದಿನಾಂಕ : 17–02–2011ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಎಸ್.ಎಚ್. ಬೆಲ್ಲದ್, ಆದ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತ ಸ್ಥಗಿತಗೊಂಡಿರುವ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ತೆಂಗಿನ ನಾರನ್ನು ಮತ್ತು ನಾರಿನ ಸರಕುಗಳನ್ನು ಉತ್ಪಾದಿಸುವ ಮತ್ತು ಮಾರಾಟ ಮಾಡುವ ಕೈಗಾರಿಕಾ ಸಹಕಾರ ಸಂಘ ನಿ., ಹೊದಿಗೆರೆ ಚನ್ನಗಿರಿ ತಾಲ್ಲೂಕ್ ಈ ಸಂಘವನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಸಂಘಗಳ ಅಭಿವೃದ್ಧಿ ಕಛೇರಿ, ಚನ್ನಗಿರಿ, ದಾವಣಗೆರೆ ಜಿಲ್ಲೆ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ. ಸಮಾಪಕರು ಸಂಘದ ಪ್ರಭಾರವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73ರನ್ವಯ ಪಡೆದುಕೊಳ್ಳತಕ್ಕದ್ದು. ಹಾಗೂ ಸಂಘದ ಆಸ್ತಿ–ಜವಾಬ್ದಾರಿಗಳ ವಿಲೇವಾರಿಗಾಗಿ ಆದ್ಯತಾಪಟ್ಟಿ ತಯಾರಿಸಿ, ಈ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಯ್ದೆ ಕಲಂ 74ರನ್ವಯ ಸಮಾಪನಾ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮೊಹರಿನೊಂದಿಗೆ ದಿನಾಂಕ : 28–02–2014 ರಂದು ಹೊರಡಿಸಿದೆ.

**P.R. 251** **ಸಹಕಾರ ಸಂಘಗಳ ಉಪ ನಿಬಂಧಕರು,**

**SC-10** ದಾವಣಗೆರೆ ಜಿಲ್ಲೆ, ದಾವಣಗೆರೆ.

## DIRECTORATE OF ECONOMICS AND STATISTICS, BANGALORE-1

### Consumer Price Index Numbers for Industrial Workers

### No. DES 24 PWX 2014, dated 21-04-2014

**State : Karnataka** **Base : 1987-88=100** **Month : February**

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| I. | **FOOD:** | | | | | | | | | | | |
| | (a) Cereals & Cereals Products | 941 | 949 | 1080 | 853 | 861 | 978 | 989 | 1022 | 801 | 1003 | 950 |
| | (b) Pulses & Pulse Products | 698 | 763 | 793 | 918 | 700 | 743 | 757 | 804 | 704 | 752 | 719 |
| | (c) Oil & Fats | 470 | 460 | 500 | 460 | 443 | 487 | 446 | 508 | 385 | 470 | 427 |
| | (d) Meat Fish & Eggs | 934 | 1061 | 1123 | 1048 | 1022 | 1037 | 959 | 1077 | 723 | 1186 | 1067 |
| | (e) Milk & Milk Products | 743 | 684 | 791 | 867 | 733 | 802 | 722 | 783 | 684 | 749 | 724 |
| | (f) Condiments & Spices | 601 | 701 | 1013 | 904 | 647 | 610 | 726 | 725 | 626 | 755 | 681 |
| | (g) Vegetables & Fruits | 679 | 779 | 911 | 895 | 724 | 751 | 779 | 796 | 678 | 667 | 986 |
| | (h) Other Food | 598 | 861 | 857 | 766 | 713 | 601 | 660 | 689 | 722 | 680 | 616 |
| | **FOOD GROUP INDEX** | **770** | **831** | **934** | **832** | **756** | **789** | **814** | **885** | **713** | **843** | **803** |
| II. | Pan, Supari, Tobacco & Intoxicants | 836 | 1059 | 933 | 863 | 727 | 894 | 773 | 830 | 586 | 738 | 880 |
| III. | Fuel & Light | 666 | 660 | 692 | 781 | 700 | 681 | 642 | 750 | 570 | 893 | 538 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 346 | 553 | 483 | 457 | 402 | 439 | 601 | 719 | 352 | 708 | 235 |
| VI. | **Miscellaneous:** | | | | | | | | | | | |
| | (a) Medical Care | 751 | 966 | 640 | 492 | 387 | 331 | 675 | 634 | 465 | 507 | 355 |
| | (b) Education, Recreation & Amusement | 790 | 791 | 1102 | 488 | 942 | 1148 | 826 | 640 | 1125 | 1530 | 1006 |
| | (c) Transport & Communication | 703 | 800 | 673 | 788 | 868 | 720 | 818 | 1116 | 920 | 677 | 730 |
| | (d) Personal Care & effects | 423 | 497 | 570 | 565 | 605 | 455 | 483 | 509 | 525 | 467 | 454 |
| | (e) Other | 545 | 531 | 665 | 800 | 468 | 485 | 540 | 686 | 389 | 705 | 469 |
| | Miscellaneous Group | 603 | 667 | 713 | 610 | 640 | 617 | 626 | 650 | 661 | 727 | 571 |

| | | | | | | | | | | | | |
|---|---|---|---|---|---|---|---|---|---|---|---|---|
| | **GENERAL INDEX** | 628 | 684 | 740 | 683 | 611 | 633 | 679 | 737 | 604 | 728 | 559 |
| | To convert to Base 1960 Multiply by Linking Factor. | 7.39 | 9.19 | 8.27 | - | 8.26 | 8.56 | 9.25 | 7.92 | 9.31 | - | - |

**ಜಂಟಿ ನಿರ್ದೇಶಕರು,**
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,
ಕರ್ನಾಟಕ ಸರ್ಕಾರ, ಬೆಂಗಳೂರು

**Government of India**
**Ministry of Labour**
**Labour Bureau**
**No. 112/1 (KTK) /2014 CPI Dated: 2ND APRIL, 2014**
**Consumer Price Index Numbers for Industrial Workers (Base : 2001=100)**

**Month : FEBRUARY 2014**

| Group/Sub-Group/Centre | BELGAUM | BANGALORE | HUBLI DHARWAD | MERCARA | MYSORE |
|---|---|---|---|---|---|
| **FOOD :** | | | | | |
| (a) Cereals & Cereals Products | 260 | 276 | 258 | 264 | 302 |
| (b) Pulses & Pulses Products | 242 | 236 | 262 | 257 | 242 |
| (c) Oils & Fats | 241 | 231 | 200 | 265 | 217 |
| (d) Meat, Fish & Eggs | 376 | 335 | 329 | 298 | 324 |
| (e) Milk & Milk Products | 296 | 270 | 250 | 265 | 288 |
| (f) Condiments & Spices | 222 | 264 | 269 | 254 | 303 |
| (g) Vegetables & Fruits | 309 | 239 | 267 | 264 | 292 |
| (h) Other Food | 262 | 292 | 261 | 265 | 264 |
| **FOOD GROUP** | 273 | 273 | 261 | 267 | 285 |
| Pan, Supari, Tobacco & Intoxicants | 255 | 239 | 262 | 222 | 271 |
| Fuel & Light | 212 | 178 | 205 | 349 | 198 |
| Housing index | 237 | 219 | 335 | 102 | 264 |
| Clothing, Bedding & Footwear | 166 | 148 | 167 | 183 | 157 |
| Miscellaneous | | | | | |
| (a) Medical care | 201 | 251 | 217 | 221 | 190 |
| (b) Education, Recreation and Amusement | 170 | 174 | 174 | 328 | 132 |
| (c) Transport and Communication | 288 | 314 | 302 | 245 | 274 |
| (d) Personal Care & Effects | 191 | 249 | 232 | 201 | 211 |
| (e) Others | 229 | 218 | 226 | 210 | 266 |
| Miscellaneous Group | 213 | 248 | 232 | 235 | 208 |
| **GENERAL INDEX** | 245 | 242 | 256 | 245 | 251 |

**P.R. 250**
**SC - 5**

**L.R. CHAUHAN**
ECONOMIC OFFICER

**ಜಂಟಿ ನಿರ್ದೇಶಕರು,**
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,
ಕರ್ನಾಟಕ ಸರ್ಕಾರ, ಬೆಂಗಳೂರು

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಸಹಕಾರ ಭವನ, ಶಿವಮೊಗ್ಗ

**ವಿಷಯ :** ನಿಷ್ಕ್ರಿಯಗೊಂಡಿರುವ "ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ.," ವಿಠಲಾಪುರ ಸೊರಬ ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ ವಿಭಾಗ, ಸಾಗರ ರವರ ಪತ್ರ ನಂ. ಎಆರ್25/ಎಲ್‌ಕ್ಯೂಡಿ/ಸಿಆರ್–/2013–14, 1936, ದಿನಾಂಕ : 18–02–2014.

2. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಒ 139 ಸಿಎಲ್‌ಎಂ 2010, ಬೆಂಗಳೂರು, ದಿನಾಂಕ : 17–02–2011.

**ಪ್ರಸ್ತಾವನೆ :**

ನಿಷ್ಕ್ರಿಯಗೊಂಡಿರುವ "ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ.," ವಿಠಲಾಪುರ ಸೊರಬ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ ಇವರ ನೋಂದಣಿ ಸಂಖ್ಯೆ : ಎಆರ್25/ನೋಂದಣಿ/ಸಿಆರ್–39/29606/2008–09, ದಿನಾಂಕ : 08–04–2008 ರಂದು ಸಂಘವು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿಯನ್ನು ಹೊಂದಿ ನೋಂದಣಿಯಾಗಿರುತ್ತದೆ.

ಸಂಘದ ಆಡಳಿತ ಮಂಡಳಿ ಕೋರಂ ಕೊರತೆಯಿಂದ ಆಡಳಿತ ಮಂಡಳಿಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ, ಇವರು ರದ್ದುಪಡಿಸಿ, ವಿಶೇಷಾಧಿಕಾರಿಯನ್ನು ದಿನಾಂಕ : 17–10–2013ರ ಆದೇಶದಲ್ಲಿ ನೇಮಕ ಮಾಡಿರುತ್ತಾರೆ. ವಿಶೇಷಾಧಿಕಾರಿ ಸಂಘದ ಪ್ರಭಾರವನ್ನು ಪಡೆದಿರುತ್ತಾರೆ. ದಿನಾಂಕ : 04–02–2014 ರಂದು ನಡೆದ ವಿಶೇಷಾಧಿಕಾರಿಗಳ ಸಭೆಯಲ್ಲಿ ಸಂಘದಲ್ಲಿ ಹಾಲಿನ ಸಂಗ್ರಹಿಸುವಿಕೆ ಪ್ರಮಾಣ ಕಡಿಮೆಯಾಗಿದ್ದು, ಸಂಘದ ಸದಸ್ಯರಲ್ಲಿ ಸಂಘವನ್ನು ಕಾರ್ಯನಿರ್ವಹಿಸಿಕೊಂಡು ಹೋಗುವ ಯಾವುದೇ ಲಕ್ಷಣಗಳು ಕಾಣದೇ ಇರುವುದರಿಂದ ಸದರಿ ಸಹಕಾರ ಸಂಘವನ್ನು ಸಮಾಪನೆಗೊಳಿಸಬಹುದೆಂದು ನಡವಳಿಯನ್ನು ವಿಶೇಷಾಧಿಕಾರಿ ದಾಖಲಿಸಿರುತ್ತಾರೆ. ಈ ನಡವಳಿಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ ವಿಭಾಗ, ಸಾಗರರವರು ಅಂಗೀಕರಿಸಿ ಸಂಘದ ಸಮಾಪನೆಗೆ ಉಲ್ಲೇಖ (1)ರ ಪತ್ರದೊಂದಿಗೆ ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ ವಿಭಾಗ, ಸಾಗರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಆದೇಶ ಸಂ. ಡಿಆರ್‌ಎಸ್/ಎಲ್‌ಕ್ಯೂಡಿ/ಡಿಎಲ್‌ಎಸ್/ಸಿಆರ್–205/2013–14, ದಿನಾಂಕ : 20–03–2014.**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2)(ಬಿ) ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಒ 139 ಸಿಎಲ್‌ಎಂ 2010, ಬೆಂಗಳೂರು, ದಿನಾಂಕ : 17–02–2011 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ॥ ಸುನೀತಾ ಸಿದ್ರಾಮ್ ಕೆ.ಸಿ.ಎಸ್. ಆದ ನಾನು ನಿಷ್ಕ್ರಿಯಗೊಂಡಿರುವ "ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ.," ವಿಠಲಾಪುರ ಸೊರಬ ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73(1)ರಂತೆ ಮಾರ್ಗ ವಿಸ್ತರಣಾಧಿಕಾರಿ ಸೊರಬ ತಾಲ್ಲೂಕು ಶಿವಮೊಗ್ಗ ಹಾಲು ಉತ್ಪಾದಕರ ಸಹಕಾರ ಸಂಘಗಳ ಒಕ್ಕೂಟ ನಿ., ಮಾಚೇನಹಳ್ಳಿ ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಕೂಡಲೇ ಸಂಘದ ಪ್ರಭಾರವನ್ನು ಪಡೆದು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಛೇರಿಗೆ ಸಲ್ಲಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 74 ಮತ್ತು ನಿಯಮ 33 ರಂತೆ ಸಮಾಪನಾಧಿಕಾರಿಯ ಕರ್ತವ್ಯ ನಿರ್ವಹಿಸುವುದಲ್ಲದೆ, ಸಂಘದ ಇತ್ತೀಚಿನ ಲೆಕ್ಕ ತಪಾಸಣಾ ವರದಿಯನ್ನಾಧರಿಸಿ, ಈ ಕಛೇರಿಯ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿಗಳನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ನನ್ನ ಸ್ವ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ : 20–03–2014 ರಂದು ನೀಡಲಾಗಿದೆ.

**ಡಾ॥ ಸುನೀತಾ ಸಿದ್ರಾಮ್**
ಸಹಕಾರ ಸಂಘಗಳ ಉಪ ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

P.R. 236
SC - 10

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಜಿಲ್ಲಾಡಳಿತ ಭವನ, 2ನೇ ಮಹಡಿ, ಕೊಠಡಿ ಸಂ. 52, 53, ಕರೂರು ಕೈಗಾರಿಕಾ ಪ್ರದೇಶ, ಪಿ.ಬಿ. ರಸ್ತೆ, ದಾವಣಗೆರೆ, ಇವರ ಕಾರ್ಯಾಲಯ.

**ನಂ. ಡಿಆರ್/ಡಿವಿಜಿ/ಸ್ಥಗಿತ.ಸ.ಸಂಗಳು/ಸಿಆರ್–15/2013–14, ದಿನಾಂಕ : 29–03–2014.**

**ವಿಷಯ :** ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಸಾಸ್ವೆಹಳ್ಳಿ ಹರಪನಹಳ್ಳಿ ತಾಲ್ಲೂಕು ಇದರ ನೋಂದಣಿಯನ್ನು ರದ್ದು ಪಡಿಸುವ ಬಗ್ಗೆ.

**ಉಲ್ಲೇಖ :** 1. ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಪತ್ರ ಸಂಖ್ಯೆ : ಡಿಆರ್/ ಡಿವಿಜಿ/ಸಮಾಪನೆ/ಸಿಆರ್–15/2013–14, ದಿನಾಂಕ : 28–10–2013.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಉಪ ವಿಭಾಗ, ಹರಪನಹಳ್ಳಿ, ಇವರ ಪತ್ರ ಸಂಖ್ಯೆ : ಸನಿ/ಹೆಚ್.ಆರ್.ಪಿ./ಸಮಾಪನೆ/ಸಿಆರ್–734/2013–14, ದಿನಾಂಕ : 21–03–2014.

**ಪ್ರಸ್ತಾವನೆ :**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ : ಎಆರ್–23/ 22268/95–96, ದಿನಾಂಕ : 30–03–1996ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ ಉಲ್ಲೇಖ (1)ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು ದಾವಣಗೆರೆ ಇವರು ದಿನಾಂಕ : 19–11–2013 ಆದೇಶದಲ್ಲಿ ಸಮಾಸಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಹರಪನಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ

ನೇಮಿಸಲಾಗಿದೆ. ಸದರಿ ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ನಂ. ಡಿಆರ್/ಡಿವಿಜಿ/ಸಮಾಪನೆ/ಸಿಆರ್–15/2013–14, ದಿನಾಂಕ : 29–03–2014.**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಎಂಡಬ್ಲ್ಯೂ : ಸಿಎಲ್ಎಂ : 2001, ದಿನಾಂಕ : 21–11–2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ಜಿ. ಓಬನಾಯ್ಕ ಸಹಕಾರ ಸಂಘಗಳ ಉಪ ನಿಬಂಧಕರು ದಾವಣಗೆರೆ ಜಿಲ್ಲೆ ದಾವಣಗೆರೆ ಆದ ನಾನು ಸಮಾಪನೆಗೊಂಡ ಹಾಲು ಉತ್ಪಾದರ ಸಹಕಾರ ಸಂಘ ನಿ., ಸಾಸ್ವೆಹಳ್ಳಿ, ಹರಪನಹಳ್ಳಿ ತಾಲ್ಲೂಕ್ ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ. ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಂಘದ ಕಾರ್ಯ ಚಟುವಟಿಕೆಗಳು ನಿಂತುಹೋಗಿರುತ್ತವೆಂದು ಭಾವಿಸತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹರಪನಹಳ್ಳಿ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ : 29–03–2014 ರಂದು ಹೊರಡಿಸಿರುತ್ತೇನೆ.

**ಸಹಕಾರ ಸಂಘಗಳ ಉಪ ನಿಬಂಧಕರು,**
ದಾವಣಗೆರೆ ಜಿಲ್ಲೆ, ದಾವಣಗೆರೆ.

**P.R. 242**
**SC-10**

## ಕಾರಾಗೃಹಗಳ ಇಲಾಖೆ

## ಅಧೀಕ್ಷಕರ ಕಾರ್ಯಾಲಯ, ಕೇಂದ್ರ ಕಾರಾಗೃಹ, ಬಳ್ಳಾರಿ

### ಅಧಿಕೃತ ಜ್ಞಾಪನ

**ಸಂಖ್ಯೆ : ಕೇಕಾಬ : ವಿಚಾರಣೆ: ಸಿವಿ1:6611:2013–14, ದಿನಾಂಕ : 13–01–2014.**

**ವಿಷಯ :** ಶ್ರೀ ಹೆಚ್.ಜಿ. ಮುನಿರಾಜ, ದ್ವಿತೀಯ ದರ್ಜೆ ಸಹಾಯಕರು, ಕೇಂದ್ರ ಕಾರಾಗೃಹ, ಬಳ್ಳಾರಿರವರು ಅನಧಿಕೃತ ಗೈರು ಹಾಜರಾಗಿರುವ ಬಗ್ಗೆ.

ಶ್ರೀ ಹೆಚ್.ಜಿ. ಮುನಿರಾಜ, ದ್ವಿದ. ಸಹಾಯಕರು, ಕೇಂದ್ರ ಕಾರಾಗೃಹ, ಬಳ್ಳಾರಿ ಆದ ನೀವು ದಿನಾಂಕ : 24–03–2011ರಿಂದ ಇಲ್ಲಿಯವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತೀರಿ. ಈ ಬಗ್ಗೆ ನಿಮಗೆ ಎರಡು ಜ್ಞಾಪನ ಪತ್ರಗಳನ್ನು ಹಾಗೂ ದೋಷಾರೋಪಣಾ ಪಟ್ಟಿಯನ್ನು ನಿಮ್ಮ ಸೇವಾಪುಸ್ತಕದಲ್ಲಿ ನಮೂದಿಸಿರುವ ಮನೆ ವಿಳಾಸಕ್ಕೆ ಕಳುಹಿಸಲಾಗಿತ್ತು. ಅದರಲ್ಲಿ ಒಂದು ಜ್ಞಾಪನ ಪತ್ರವನ್ನು ಸ್ವೀಕರಿಸಿರುತ್ತೀರಿ. ಇನ್ನೊಂದು ಜ್ಞಾಪನ ಪತ್ರವು ಹಾಗೂ ದೋಷಾರೋಪಣೆ ಪಟ್ಟಿಯು ಸ್ವೀಕೃತವಾಗದೇ ವಾಪಸ್ಸು ಬಂದಿರುತ್ತವೆ. ಈ ಜ್ಞಾಪನ ಪ್ರಕಟಿಸಿದ 7 ದಿನಗಳ ಒಳಗೆ ಕರ್ತವ್ಯಕ್ಕೆ ಹಾಜರಾಗಲು ತಿಳಿಸಿದೆ. ತಪ್ಪಿದ್ದಲ್ಲಿ ಕ.ನಾ.ಸೇ. ನಿಯಮಾವಳಿ ನಿಯಮ 108ರ ಪ್ರಕಾರ ನಿಮ್ಮನ್ನು ಸೇವೆಯಿಂದ ವಜಾ ಮಾಡುವ ಕ್ರಮ ಕೈಗೊಳ್ಳಲಾಗುವುದೆಂದು ತಿಳಿಸಿದೆ.

**ಶಿಸ್ತು ಪ್ರಾಧಿಕಾರಿಗಳು ಹಾಗೂ ಅಧೀಕ್ಷಕರು**
ಕೇಂದ್ರ ಕಾರಾಗೃಹ, ಬಳ್ಳಾರಿ

**P.R. 246**

## OFFICE OF THE CITY CIVIL COURT, BANGALORE

### NOTIFICATION

**No. ADM-I (E) 994/2014, Bangalore, Dated : April 9,2014**

Sri K. Nagaraju, Asst. Registrar, City Civil Court, Bangalore, is permitted to surrender earned leave for 15 days as on 6.4.2014 for the encashment benefit for the calendar year 2014.

He shall be paid pay and allowances admissible for the period of leave so surrendered at the rate of 1/ 30th of the monthly pay and allowances for each day of leave surrendered as per the provisions contained in G.O.No. FD 3 SRS 95, dated 27.3.1995 and G.O.No. FD SRS 2000 dated 26.12.2000 and addendum dated 28.3.2001 to that G.O. and G. O. No. FD 9 SENISE 2013 Dt. 28.11.2013.

BY ORDER OF THE PRL.CITY CIVIL & SESSIONS JUDGE,
**Registrar,**
City Civil Court, Bangalore

**P.R. 247**

## OFFICE OF THE CITY CIVIL COURT, BANGALORE

### NOTIFICATION

**No. ADM-I (E) 996/2014, Bangalore, April 9,2014**

Sri H. G. Honnagangadharaiah, Asst. Registrar, City Civil Court, Bangalore, is permitted to surrender earned leave for 15 days as on 6.4.2014 for the encashment benefit for the calendar year 2014.

He shall be paid pay and allowances admissible for the period of leave so surrendered at the rate of 1/ 30th of the monthly pay and allowances for each day of leave surrendered as per the provisions contained in G.O.No. FD 3 SRS 95, dated 27.3.1995 and G.O.No. FD SRS 2000 dated 26.12.2000 and addendum dated 28.3.2001 to that G.O. and G. O. No. FD 9 SENISE 2013 Dt. 28.11.2013.

BY ORDER OF THE PRL.CITY CIVIL & SESSIONS JUDGE,

**P.R. 248**

**Registrar,**

City Civil Court, Bangalore

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರ ಕಾರ್ಯಾಲಯ, ಬೀದರ ಜಿಲ್ಲೆ, ಬೀದರ

**ವಿಷಯ :** ಸಮಾಪನೆಗೊಂಡ ಘಾಟಭೋರಾಳ ಪತ್ತಿನ ಸಹಕಾರ ಸಂಘ ನಿಯಮಿತ, ಘಾಟಭೋರಾಳ ತಾ॥ ಹುಮನಾಬಾದ ಜಿಲ್ಲಾ ಬೀದರ ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :**
1. ಈ ಕಛೇರಿ ಆದೇಶ ಸಂಖ್ಯೆ : ಉನಿಬಿ/ಸಮಾಪನೆ/ಸಿಆರ್/1998–99/ದಿನಾಂಕ : 08–03–1999.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್, ಇವರ ಪತ್ರ ಸಂಖ್ಯೆ: ಸನಿಬಿ1/ವಿ2/ಸಮಾಪನೆ/ 2013–14/1430/ ದಿನಾಂಕ : 02–01–2014.

**ಪೀಠಿಕೆ :**

ಘಾಟಭೋರಾಳ ಪತ್ತಿನ ಸಹಕಾರ ಸಂಘ ನಿಯಮಿತ, ಘಾಟಭೋರಾಳ ತಾ॥ ಹುಮನಾಬಾದ ಜಿಲ್ಲಾ ಬೀದರ ಇದನ್ನು ಉಲ್ಲೇಖಿತ (1)ರ ಆದೇಶದ ಮೂಲಕ ಸಮಾಪನೆಗೊಳಿಸಿ ಕ್ಷೇತ್ರ ಸಹಾಯಕರು/ವ್ಯವಸ್ಥಾಪಕರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಯಮಿತ, ಬೀದರ ಶಾಖೆ, ಘಾಟಭೋರಾಳ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸದರಿ ಅಧಿಕಾರಿಗಳು ಸಂಘದ ಮಟ್ಟದಲ್ಲಿ ಸರ್ಕಾರಕ್ಕೆ ಮತ್ತು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಯಮಿತ, ಬೀದರಕ್ಕೆ ಯಾವುದೇ ರೀತಿ ಸಾಲಗಳು ಪಾವತಿಸುವುದಕ್ಕೆ ಬಾಕಿ ಇರುವುದಿಲ್ಲ ಎಂದು ಸಂಘದ ಮಟ್ಟದಲ್ಲಿ ಯಾವುದೇ ದಾಖಲಾತಿಗಳು ಕೂಡಾ ಲಭ್ಯವಿರುವುದಿಲ್ಲ. ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಯಮಿತ, ಬೀದರ ಶಾಖೆ, ಘಾಟಭೋರಳ ಇದರಲ್ಲಿ ಸಂಘದ ಉಳಿತಾಯ ಖಾತೆ ಸಂಖ್ಯೆ 4 ರಲ್ಲಿ ರೂ. 9252=00 (ರೂ. ಒಂಭತ್ತು ಸಾವಿರದ ಎರಡನೂರ ಐವತ್ತೆರಡು ಮಾತ್ರ) ಗಳು ಶಿಲ್ಕು ಮಾತ್ರ ಇರುತ್ತದೆ.

ಮುಂದುವರೆದು ಸಂಘದ ಮಟ್ಟದಲ್ಲಿ ಯಾವುದೇ ಚಟುವಟಿಕೆಗಳು ಇಲ್ಲದೆ ಇರುವುದರಿಂದ ಇದರ ನೋಂದಣಿಯನ್ನು ರದ್ದು ಮಾಡುವುದಕ್ಕೆ ಉಲ್ಲೇಖ (2) ಪತ್ರದ ಮೂಲಕ ಸಹಾಯಕ ನಿಬಂಧಕರು, ಸಹಕಾರ ಸಂಘಗಳು ಬೀದರ ಇವರು ಸದರಿ ಸಂಘದ ನೋಂದಣಿ ರದ್ದು ಮಾಡಲು ಶಿಫಾರಸ್ಸು ಮಾಡಿದ ಪ್ರಯುಕ್ತ ಈ ಕೆಳಗಿನ ಆದೇಶ ಜಾರಿ ಮಾಡಿದೆ.

**ಆದೇಶ ನಂ. ಉನಿಬಿ/ವಿ5/ಸಮಾಪನೆ/ರದ್ದು/ಸಿಆರ್/2013–14, ದಿನಾಂಕ : 16–01–2014.**

ಈ ಆದೇಶದ ಪೀಠಿಕೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಓ/139/ಸಿಎಲ್ಎಂ/2010/ದಿನಾಂಕ : 17–02–2011ರ ಮೂಲಕ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರ ಮೂಲಕ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಫೈರೋಜ್ ಟಿ. ಉಪ ನಿಬಂಧಕರು, ಸಹಕಾರ ಸಂಘಗಳು ಬೀದರ ಜಿಲ್ಲೆ ಬೀದರ ಆದ ನಾನು ಸಮಾಪನೆಗೊಂಡ ಘಾಟಭೋರಾಳ ಇದರ ನೋಂದಣಿ ಸಂಖ್ಯೆ : ಎಆರ್1/ಎಸ್–9/ಜೆಓಜೆ/8273/ದಿನಾಂಕ : 15–04–1991 ನ್ನು ರದ್ದುಗಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿ ಆದೇಶದ ದಿನಾಂಕದಿಂದ ಸದರಿ ಸಂಘದ ಎಲ್ಲಾ ಕಾರ್ಯಚಟುವಟಿಕೆಗಳು ನಿಂತು ಹೋಗುತ್ತಿರುತ್ತವೆಂದು ಭಾವಿಸತಕ್ಕದ್ದು. ಹಾಗೂ ಈ ಸಂಘವು ಆಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲೆಗಳನ್ನು ಸಹಾಯಕ ನಿಬಂಧಕರು, ಸಹಕಾರ ಸಂಘಗಳು ಬೀದರ್ ಇವರ ಕಛೇರಿಗೆ ಹಸ್ತಾಂತರಿಸಲು ಸಮಾಪನಾಧಿಕಾರಿಗಳಿಗೆ ಸೂಚಿಸಿದೆ.

**P.R. 249**

**SC - 10**

**ಸಹಕಾರ ಸಂಘಗಳ ಉಪ ನಿಬಂಧಕರು,**

ಬೀದರ.

## KARNATAKA POWER TRANSMISSION CORPORATION LIMITED

**Bangalore Major Works North Dvn., A.R.circle, Bangalore-09.**

**NOTIFICATION**

**No: EE (E)/ BMWND/AEE-1/F-282/ 14-15, Dated: 25th April 2014.**

The Karnataka Power Transmission Corporation Ltd., have formulated a Scheme under section 67 of the Electricity Supply Act 2003 and the same is here with published in pursuance of section 67(ii) of the said Act for information of the general public. Particulars of the scheme are as follows.

**1.Name of the scheme:**

Construction of 66kV SC line for a route length of 10.1kms from existing 220/66kV Peenya station to existing 66/11kV Byadarahalli sub-station using HTLS conductor suitable for coyote on proposed 66kV Narrow based towers (KPTCL design) and

existing 66kV SC towers including providing suitable clearance to 220kV SC Peenya- Singarapet line & 220 kV SC Peenya-Somanahalli line crossing the 66kV line, Bangalore North taluk, Bangalore urban district.

**2.Salient Features:** The existing 66kV SC line from 220kV Peenya to T.G.Halli is loaded more than 90%. The existing towers are very old and cannot take the loads of new conductor. Hence the existing towers and conductor is to replaced. Also it is an ideal Load Centre where the Industrial, Commercial, Agricultural and domestic loads are existing and the problems of low voltage, frequent interruptions in power supply can be overcome and further load growth can be catered in and around the area.

**3.Line Passes through these area:** Peenya, Sanjay Gandhi Nagar, Muneshwara extension, Choudeshwari nagar, Lakshmidevi nagar, Laggere, Srinivas Nagar, Sunkadakatte, Byadarahalli.

**4.Awarded Cost of the Project:** Line:- 1318.28 lakhs.

The corporation shall have and exercise all powers, which the telegraph authorities process under Para (iii) of Indian Telegraph Act 1885 (13 of 1885) for carrying of the above scheme.

**Executive Engineer (Elec.),**
Bangalore Major Works North Dvn.
K.P.T.C.L., A.R.Circle, Bangalore-09.

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ

### ಪ್ರಕಟಣೆ

**ಸಂಖ್ಯೆ: ಇಇಇ/ಬೆಂ.ಬೃ.ಕಾ.ಉ.ವಿ/ಎಇಇ–1/ಕ–282/14–15 ದಿನಾಂಕ 25ನೇ ಏಪ್ರಿಲ್ 2014.**

ಕ.ವಿ.ಪ್ರ.ನಿ.ನಿ ಯು 2003ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮ ಪ್ರಕರಣದ 67 ರ ಅನ್ವಯ ಯೋಜನೆಗಳನ್ನು ರೂಪಿಸಿದೆ ಹಾಗೂ ಸದರಿ ನಿಯಮದ ಪ್ರಕರಣ 67(2)(C)ರ ಅನ್ವಯ ಈ ಮೂಲಕ ಯೋಜನೆಗಳನ್ನು ಸಾರ್ವಜನಿಕ ತಿಳುವಳಿಕೆಗಾಗಿ ಪ್ರಕಟಿಸುತ್ತಿದೆ. ಯೋಜನೆಯ ವಿವರಗಳು ಈ ರೀತಿ ಇವೆ.

1) **ಯೋಜನೆಯ ಹೆಸರು :–** ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆಯಲ್ಲಿ ಹಾಲಿ ಇರುವ 66 ಕೆ.ವಿ.ಪೀಣ್ಯ– ಬ್ಯಾಡರಹಳ್ಳಿ ವಿದ್ಯುತ್ ಮಾರ್ಗವನ್ನು ಹೆಚ್ಚುವರಿ ವಿದ್ಯುತ್ ಹೊರೆಯನ್ನು ಭರಿಸಲು HTLS ತಂತಿ ಉಪಯೋಗಿಸಿ ಬಲಪಡಿಸುವ ಯೋಜನೆ.

2) **ಯೋಜನೆಯ ಪ್ರಯೋಜನಗಳು:–** ಹಾಲಿ ಇರುವ 66 ಕೆ.ವಿ. ಪೀಣ್ಯ– ತಿಪ್ಪಗೊಂಡನಹಳ್ಳಿ ವಿದ್ಯುತ್ ಮಾರ್ಗವು ಶೇಕಡ 90% ವಿದ್ಯುತ್ ಹೊರೆಯನ್ನು ಭರಿಸಲಾಗಿದೆ. ಹಾಲಿ ಇರುವ ಕಂಬಗಳು ಹಳೆಯದಾಗಿದ್ದು ಹೆಚ್ಚುವರಿ ವಿದ್ಯುತ್ ಹೊರೆಯನ್ನು ಭರಿಸಲು ಸಾಧ್ಯವಿರುವುದಿಲ್ಲ. ಆದ ಕಾರಣ ಹಾಲಿ ಇರುವ ಹಳೆಯ ಕಂಬಗಳು ಮತ್ತು ವಿದ್ಯುತ್ ತಂತಿಯನ್ನು ಬದಲಾಯಿಸಲಾಗುತ್ತಿದೆ. ಈ ಜಾಗ ಕೈಗಾರಿಕೆ, ವಾಣಿಜ್ಯ, ವ್ಯವಸಾಯ ಹಾಗೂ ಗೃಹಬಳಕೆ ವಿದ್ಯುತ್ ಬಳಕೆದಾರರಿಗೆ ಕೇಂದ್ರ ಜಾಗವಾಗಿರುತ್ತದೆ. ಸಮರ್ಪಕ ವಿದ್ಯುತ್ ಪೂರೈಕೆ ಹಾಗೂ ಅಡಚಣೆ ರಹಿತ ವಿದ್ಯುತ್ ಸರಬರಾಜು ಮಾಡುವುದು ಮತ್ತು ಮುಂದಿನ ಹೆಚ್ಚುವರಿ ವಿದ್ಯುತ್ ಹೊರೆಯನ್ನು ಭರಿಸುವುದು.

3) **66 ಕೆ.ವಿ.ಮಾರ್ಗ ಹಾದುಹೋಗುವ ಹಳ್ಳಿಗಳು ಮತ್ತು ಪ್ರದೇಶಗಳು :–** ಪೀಣ್ಯ, ಸಂಜಯಗಾಂಧಿನಗರ, ಮುನೇಶ್ವರ, ಚೌಡೇಶ್ವರಿನಗರ, ಲಕ್ಷ್ಮೀದೇವಿ ನಗರ, ಲಗ್ಗೆರೆ, ಶ್ರೀನಿವಾಸ ನಗರ, ಸುಂಕದಕಟ್ಟೆ, ಬ್ಯಾಡರಹಳ್ಳಿ ಮುಂತಾದ ಪ್ರದೇಶಗಳು.

4) **ಅಂದಾಜು ವೆಚ್ಚ :–** 1318.28 ಲಕ್ಷಗಳು

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ (ಏಏಏ) ರ (ಕೇಂದ್ರೀಯ ಕಾಯದೆ 1885ರ 13) ಅನ್ವಯ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ.

**ಕಾರ್ಯನಿರ್ವಾಹಕ ಇಂಜಿನಿಯರು (ವಿದ್ಯುತ್)**
ಬೆಂಗಳೂರು ಬೃಹತ್ ಕಾಮಗಾರಿ ಉತ್ತರ ವಿಭಾಗ
ಕವಿಪ್ರನಿನಿ, ಆನಂದರಾವ್ ವೃತ್ತ, ಬೆಂಗಳೂರು–9

**P.D. 34**
**SC - 5**

## KARNATAKA POWER TRANSMISSION CORPORATION LIMITED

**Office of the Executive Engineer Elecl., Mandya Major Works Division, KPTCL, N.R.Mohalla, Mysore-7.**

### NOTIFICATION

**No: EEE/AEE(E)/MWD/MDY/ 2014-15/10-14, Dated: 02nd April 2014.**

The Karnataka Power Transmission Corporation Limited has formulated a scheme under section 28 and clause(e) of section 18 of the Indian Electricity Supply Act 1948 and the scheme is herewith published in pursuance of section 29(2) of the said act and also under Indian Electricity Act 2003 section 67 to be read with 67(2), this notification is issued for information of the General public, Particulars of scheme are as here under.

**Name of the work** :Construction of 66KV SC tap line on DC tower for a distance of 9.727 Kms from existing Guddenahalli tap line to proposed 66/11KV Bhogadhi Sub-station in Nagamangala Taluk, Mandya District.

| | |
|---|---|
| **Salient Feature** | :Improvement of Voltage and meet future load growth in and around Nagamangala Taluk, Mandya District. |
| **Areas Passing Through** | :Guddenahalli, Vaddarahally, Gejjehosahally, Ganganahalli, Huvinahally, Karikyathanahally, Manchipatna and Bhogadhi limits. |
| **Approximate length line** | :9.727Kms |
| **Approximate Cost** | :567.46 Lakhs |

KPTCL shall have and exercise all powers which the telegraph authorities possess under Part III of Indian Telegraph Act 1885 (13 of 1885) for implementation of the above said scheme. Any objection regarding the above scheme shall be sent to the under signed office within **two months** from the date of Publication of this notification for consideration by Corporation.

**Executive Engineer, ELE**
Mandya Major Works DN.
K.P.T.C.L., MYSORE.

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ

### ಪ್ರಕಟಣೆ

**ಕಾರ್ಯನಿರ್ವಾಹಕ ಇಂಜಿನಿಯರ್ (ವಿ)ರವರ ಕಛೇರಿ , ಮಂಡ್ಯ ಬೃಹತ್ ಕಾಮಗಾರಿ ವಿಭಾಗ, ಕ.ವಿ.ಪ್ರ.ನಿ.ನಿ ಎನ್.ಆರ್.ಮೊಹಲ್ಲ, ಮೈಸೂರು–7.**

**ನಂ:.ಕಾನಿಇಂ(ವಿ)/ಸಕಾಇಂ(ವಿ)/ಬೃಕಾವಿ/ಮ/14–15/10–14 ದಿನಾಂಕ 02ನೇ ಏಪ್ರಿಲ್ 2014.**

ಕ.ವಿ.ಪ್ರ.ನಿ.ನಿ.ಯು 1948ರ ಭಾರತೀಯ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮ ಪ್ರಕರಣ 28 ಮತ್ತು ಸೆಕ್ಷನ್ 18ರ ಕ್ಲಾಸ್(ಇ) ಅನ್ವಯ ಯೋಜನೆಯನ್ನು ರೂಪಿಸಿದೆ ಹಾಗೂ ಸದರಿ ನಿಯಮದ ಪ್ರಕರಣ 29(2)ರ ಅನ್ವಯ ಹಾಗೂ ಭಾರತೀಯ ವಿದ್ಯುಚ್ಛಕ್ತಿ ಅಧಿನಿಯಮ 2003 ಪ್ರಕರಣ 67ರ ಮತ್ತು 67(2)ರ ಅನ್ವಯ ಈ ಮೂಲಕ ಯೋಜನೆಗಳನ್ನು ಸಾರ್ವಜನಿಕ ತಿಳುವಳಿಕೆಗಾಗಿ ಪ್ರಕಟಿಸುತ್ತಿದೆ. ಯೋಜನೆಯ ವಿವರಗಳು ಈ ರೀತಿ ಇವೆ.

| | | |
|---|---|---|
| 1) | **ಯೋಜನೆಯ ಹೆಸರು :** | ಮಂಡ್ಯ ಜಿಲ್ಲೆ, ನಾಗಮಂಗಲ ತಾಲೋಕು ಭೋಗಾಧಿ ವ್ಯಾಪ್ತಿಯಲ್ಲಿ 1 X 8 MVA 66/11 ಕೆ.ವಿ. ವಿದ್ಯುತ್ ಉಪಕೇಂದ್ರವನ್ನು ಸ್ಥಾಪಿಸುವ ಸಂಬಂಧ ಹಾಲಿ ಇರುವ 66 ಕೆ.ವಿ. ಗುಡ್ಡೆನಹಳ್ಳಿ ಟ್ಯಾಪ್ ಮಾರ್ಗದಿಂದ, ಉದ್ದೇಶಿತ 66/11 ಭೋಗಾಧಿ ವಿದ್ಯುತ್ ಉಪಕೇಂದ್ರಕ್ಕೆ ಸುಮಾರು 9.927 ಕಿ.ಮೀ. 66 ಕೆ.ವಿ. ವಿದ್ಯುತ್ ಮಾರ್ಗವನ್ನು ನಿರ್ಮಾಣ ಮಾಡುವುದು. |
| 2) | **ಯೋಜನೆಯ ಪ್ರಯೋಜನಗಳು :** | ಭೋಗಾಧಿ ಗ್ರಾಮ ಮತ್ತು ಸುತ್ತಮುತ್ತಲಿನ ಗ್ರಾಮಗಳಿಗೆ ಉತ್ತಮ ಗುಣಮಟ್ಟದ ವಿದ್ಯುತ್ ಸರಬರಾಜು ಮಾಡುವುದು. |
| 3) | **66 ಕೆ.ವಿ.ಮಾರ್ಗ ಹಾದು ಹೋಗುವ ಹಳ್ಳಿಗಳು ಮತ್ತು ಪ್ರದೇಶಗಳು :** | ಗುಡ್ಡೇನಹಳ್ಳಿ, ವಡ್ಡರಹಳ್ಳಿ, ಗಂಗನಹಳ್ಳಿ, ಗೆಜ್ಜೆಹೊಸಹಳ್ಳಿ, ಹೂವಿನಹಳ್ಳಿ, ಕರಿಕ್ಯಾತನಹಳ್ಳಿ, ಮಂಚಿಪಟ್ಟಣ, ಮತ್ತು ಭೋಗಾಧಿ ಸರಹದ್ದು |
| 4) | **ಮಾರ್ಗದ ಅಂದಾಜು ಉದ್ದ :** | 9.727 ಕಿ.ಮೀ. |
| 5) | **ಅಂದಾಜು ವೆಚ್ಚ :** | ರೂ. 567.46 ಲಕ್ಷಗಳು. |

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ (III)ರ (ಕೇಂದ್ರೀಯ ಕಾಯ್ದೆ 1885ರ 13) ಅನ್ವಯ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ. ಸದರಿ ಯೋಜನಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಗಮನಕ್ಕೆ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ **ಎರಡು ತಿಂಗಳ** ಒಳಗೆ ಈ ಕೆಳ ಸಹಿದಾರರ ಕಛೇರಿಗೆ ಕಳಿಸಬಹುದು.

**Executive Engineer, ELE**
Mandya Major Works DN.
K.P.T.C.L., MYSORE.

**P.D. 35**
**SC - 5**

## PUBLIC NOTICE

### SHANKAR CONSULTANTS PRIVATE LIMITED,

### W 202, SUNRISE CHAMBERS, 22, ULSOOR ROAD, BANGALORE- 560042.

Notice is hereby given for general information that the members of SHANKAR CONSULTANTS PRIVATE LIMITED at the Annual General Meeting of the Company held on 05-05-2014 at its Registered Office, have passed the following special resolution to wind up the company voluntarily:

"RESOLVED THAT pursuant to the provisions of section 484(1)(b), consent of the shareholders be and is hereby given for winding up the company.

"RESOLVED FURTHER that Mr. V. Jayagopal be and is hereby appointed as Liquidator of the company for the purpose of winding up, on a remuneration of Rs.1,00,000/- plus out of pocket expenses at actual.

"RESOLVED FURTHER that Mr. V. Jayagopal the Liquidator be and is hereby empowered to exercise all powers as provided in sub clauses (i) to (iv) of sub section (2) of section 457 of the companies Act, 1956."

Date: 5th May 2014

For SHANKAR CONSULTANTS PRIVATE LIMITED (in Liquidation)
**V. JAYAGOPAL,**
LIQUIDATOR,
Practising Company Secretary, C.P.No.5389.

## FORM NO.151

**[See rule 315]**

**Members' Voluntary Winding-up Notice of appointment of liquidator pursuant to section 516**
**Date: 5th May 2014**

| | |
|---|---|
| **Name of Company** | **:** SHANKAR CONSULTANTS PRIVATE LIMITED |
| **Nature of business** | **:** To act as consultants and advisors with respect to all legal matters including drafting of all kinds of agreements, deeds, etc., to provide Arbitration services for Alternative Dispute Resolutions. |
| **Address of Registered Office** | **:** W 202, SUNRISE CHAMBERS, 22, ULSOOR ROAD, Bangalore- 560042. |
| **Name(s) and address(es) of Liquidator** | : V. Jayagopal M/s V. Jayagopal & Associates, No.829, Ground floor, 10th 'A' Main, Indiranagar 1st Stage, Behind Indiranagar Metro Station, Bangalore- 560 038 |
| **Date of appointment** | : 05-05-14 |
| **By whom appointed** | : Shareholders at their meeting held on 5th May 2014. |

For SHANKAR CONSULTANTS PRIVATE LIMITED (in Liquidation)
**V. JAYAGOPAL,**
LIQUIDATOR,
Practising Company Secretary, C.P.No.5389.

**P.D. 38**
**SC - 5**

## ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ

**ವಿಷಯ :** ಸಮಾಪನೆಯಲ್ಲಿರುವ ಶ್ರೀ ಮೈಲಾರಲಿಂಗೇಶ್ವರ ಕಂಬಳಿ ಉತ್ಪಾದನಾ ಮಾರಾಟಗಾರರ ಸಹಕಾರ ಸಂಘ ನಿ., ಬುರುಜನಹಟ್ಟಿ, ಚಿತ್ರದುರ್ಗ ತಾಲ್ಲೂಕು ಇದರ ನೋಂದಣಿ ರದ್ಧತಿ ಮಾಡುವ ಬಗ್ಗೆ

**ಉಲ್ಲೇಖ :**
1. ಈ ಕಛೇರಿ ಆದೇಶ ಸಂಖ್ಯೆ/ಡಿಆರ್‌ಡಿ/ಎಲ್‌ಕ್ಯೂಡಿ/ಸಿಆರ್/29/2010-11, ದಿನಾಂಕ: 31-03-2011
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರ ಪತ್ರದ ಸಂ/ಸನಿ/30/ರದ್ಧತಿ/ಸಿಆರ್/2013-14, ದಿನಾಂಕ: 29-03-2014

**ಪ್ರಸ್ತಾವನೆ :**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ ಶ್ರೀ ಮೈಲಾರಲಿಂಗೇಶ್ವರ ಕಂಬಳಿ ಉತ್ಪಾದನಾ ಮಾರಾಟಗಾರರ ಸಹಕಾರ ಸಂಘ ನಿ., ಬುರುಜನಹಟ್ಟಿ, ಚಿತ್ರದುರ್ಗ ತಾಲ್ಲೂಕು ಇದರ ನೋಂದಣಿ ಸಂಖ್ಯೆ/ಎಆರ್‌ಸಿ30/739/ಆರ್‌ಜಿಎನ್/26132/98-99, ದಿನಾಂಕ: 10-02-1999ರಂದು ನೋಂದಣಿಯಾಗಿದ್ದು, ಸಂಘವು 2001-02ರಿಂದ ಯಾವುದೇ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸದೇ ಸ್ಥಗಿತಗೊಂಡಿದ್ದು, ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಶ್ರೀ ಎಸ್.ಟಿ. ರಾಜಪ್ಪ, ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು, ಸ.ಸಂ.ಗಳ ಉಪ ನಿಬಂಧಕರ ಕಛೇರಿ, ಚಿತ್ರದುರ್ಗ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿದ್ದು, ಸಮಾಪನಾಧಿಕಾರಿಗಳು ಸಂಘದ ಸದಸ್ಯರುಗಳಿಗೆ ಸಂಘದ ಪುನಃಶ್ಚೇತನದ ಬಗ್ಗೆ ಒಲವು ಇಲ್ಲದಿರುವುದನ್ನು ಮನಗಂಡು ದಿನಾಂಕ: 29-03-2014ರಂದು ನಡೆಸಿರುವ ಸಮಾಪನಾಧಿಕಾರಿಗಳ ನಡವಳಿಕೆ ರೀತ್ಯಾ ಬರತಕ್ಕ ಆಸ್ತಿಗಳನ್ನು ನಷ್ಟಕ್ಕೆ ವರ್ಗಾಯಿಸಿ ತೀರಿಸತಕ್ಕ ಜವಾಬ್ದಾರಿಗಳನ್ನು ಹೊಂದಾಣಿಕೆ ಮಾಡಿ ಆಸ್ತಿ-ಜವಾಬ್ದಾರಿ ತಃಖ್ತೆಯನ್ನು ಶೂನ್ಯಗೊಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಂಘವನ್ನು ಯಥಾ ಸ್ಥಿತಿಯಲ್ಲಿ ಮುಂದುವರಿಸಿದಲ್ಲಿ ಸಂಘದ ಸದಸ್ಯರುಗಳಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ಪರಿಗಣಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಮಾಪನಾಧಿಕಾರಿಗಳು ಸಲ್ಲಿಸಿರುವ ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಪರಿಶೀಲಿಸಿ ಉಲ್ಲೇಖ (2)ರ ಪತ್ರದಲ್ಲಿ ಸದರಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುವುದನ್ನು ಪರಿಶೀಲಿಸಿದೆ. ಸಮಾಪನಾಧಿಕಾರಿಗಳು ದಿನಾಂಕ: 29-03-2014ರಂದು ನಡೆಸಿರುವ ಸಮಾಪನಾ ನಡವಳಿ ಸ್ವಯಂ ವೇದ್ಯವಾಗಿರುವುದರಿಂದ ಸಮಾಪನಾಧಿಕಾರಿಗಳ ವರದಿಯ ಮೇರೆಗೆ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಕ್ರ.ಸಂ. ಡಿಆರ್‌ಡಿ/ಸಮಾಪನೆ/ರದ್ಧತಿ/ಸಿಆರ್/151/2013-2014, ದಿನಾಂಕ: 31-03-2014**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ/ಸಿಓ/139/ಸಿಎಲ್‌ಎಂ/2010, ಬೆಂಗಳೂರು, ದಿನಾಂಕ: 17-02-2011ರ ಪ್ರಕಾರ ದತ್ತವಾದ ಅಧಿಕಾರದನ್ವಯ ಜಿ. ಓಬನಾಯಕ, ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ

ಜಿಲ್ಲೆ, ಚಿತ್ರದುರ್ಗ ಆದ ನಾನು ಶ್ರೀ ಮೈಲಾರಲಿಂಗೇಶ್ವರ ಕಂಬಳಿ ಉತ್ಪಾದನಾ ಮಾರಾಟಗಾರರ ಸಹಕಾರ ಸಂಘ ನಿ., ಬುರುಜನಹಟ್ಟಿ, ಚಿತ್ರದುರ್ಗ ತಾಲ್ಲೂಕು, ಜಿತ್ರದುರ್ಗ ಜಿಲ್ಲೆ, ಈ ಸಂಘದ ನೋಂದಣಿ ಸಂಖ್ಯೆ/ಎಆರ್‌ಸಿ30/739/ಆರ್‌ಜಿಎನ್/26132/98–99, ದಿನಾಂಕ: 10–02–1999ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದು ಪಡಿಸಿರುತ್ತೇನೆ. ಈ ದಿನದಿಂದ ಸಂಘವು ಅಸ್ತಿತ್ವವನ್ನು ಕಳೆದುಕೊಂಡಿರುತ್ತದೆ. ಸಮಾಪನಾಧಿಕಾರಿಗಳು ಸಂಘದ ಎಲ್ಲಾ ದಾಖಲೆಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರಿಗೆ ಒಪ್ಪಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 31–03–2014ರಂದು ನೀಡಿರುತ್ತೇನೆ.

ಸಹಿ/–

**P.R. 270** **ಸಹಕಾರ ಸಂಘಗಳ ಉಪ ನಿಬಂಧಕರು,**
**SC - 10** **ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

## ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ

**ವಿಷಯ :** ಸಮಾಪನೆಯಲ್ಲಿರುವ ನಾಗಸಮುದ್ರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮೊಳಕಾಲ್ಮೂರು ತಾಲ್ಲೂಕು ಇದರ ನೋಂದಣಿ ರದ್ಧತಿ ಮಾಡುವ ಬಗ್ಗೆ

**ಉಲ್ಲೇಖ :**
1. ಈ ಕಛೇರಿ ಆದೇಶ ಸಂಖ್ಯೆ/ಡಿಆರ್‌ಡಿ/ಸಮಾಪನೆ/ಸಿಆರ್/29/2013–14, ದಿನಾಂಕ: 28–12–2013
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರ ಪತ್ರದ ಸಂ/ಸನಿ/30/ರದ್ಧತಿ/ಸಿಆರ್/2013–14, ದಿನಾಂಕ: 29–03–2014

**ಪ್ರಸ್ತಾವನೆ :**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ ನಾಗಸಮುದ್ರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮೊಳಕಾಲ್ಮೂರು ತಾಲ್ಲೂಕು ಇದರ ನೋಂದಣಿ ಸಂಖ್ಯೆ/ಸನಿ30/09/ಆರ್‌ಜಿಎನ್/36271/2006–07, ದಿನಾಂಕ: 19–01–2007ರಂದು ನೋಂದಣಿಯಾಗಿದ್ದು, ಸಂಘವು 2006–07ರಿಂದ ಯಾವುದೇ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸದೇ ಸ್ಥಗಿತಗೊಂಡಿದ್ದು, ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ಮೊಳಕಾಲ್ಮೂರು ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯಾಗಿ ನೇಮಕ ಮಾಡಿದ್ದು, ಸಮಾಪನಾಧಿಕಾರಿಗಳು ಸಂಘದ ಸದಸ್ಯರುಗಳಿಗೆ ಸಂಘದ ಪುನಃಶ್ಚೇತನದ ಬಗ್ಗೆ ಒಲವು ಇಲ್ಲದಿರುವುದನ್ನು ಮನಗಂಡು ದಿನಾಂಕ: 29–03–2014ರಂದು ನಡೆಸಿರುವ ಸಮಾಪನಾಧಿಕಾರಿಗಳ ನಡವಳಿಕೆ ರೀತ್ಯಾ ಬರತಕ್ಕ ಆಸ್ತಿಗಳನ್ನು ನಷ್ಟಕ್ಕೆ ವರ್ಗಾಯಿಸಿ ತೀರಿಸತಕ್ಕ ಜವಾಬ್ದಾರಿಗಳನ್ನು ಹೊಂದಾಣಿಕೆ ಮಾಡಿ ಆಸ್ತಿ–ಜವಾಬ್ದಾರಿ ತಃಖ್ತೆಯನ್ನು ಶೂನ್ಯಗೊಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಂಘವನ್ನು ಯಥಾ ಸ್ಥಿತಿಯಲ್ಲಿ ಮುಂದುವರಿಸಿದಲ್ಲಿ ಸಂಘದ ಸದಸ್ಯರುಗಳಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ಪರಿಗಣಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಮಾಪನಾಧಿಕಾರಿಗಳು ಸಲ್ಲಿಸಿರುವ ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಪರಿಶೀಲಿಸಿ ಉಲ್ಲೇಖ (2)ರ ಪತ್ರದಲ್ಲಿ ಸದರಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುವುದನ್ನು ಪರಿಶೀಲಿಸಿದೆ. ಸಮಾಪನಾಧಿಕಾರಿಗಳು ದಿನಾಂಕ: 29–03–2014ರಂದು ನಡೆಸಿರುವ ಸಮಾಪನಾ ನಡವಳಿ ಸ್ವಯಂ ವೇದ್ಯವಾಗಿರುವುದರಿಂದ ಸಮಾಪನಾಧಿಕಾರಿಗಳ ವರದಿಯ ಮೇರೆಗೆ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಕ್ರ.ಸಂ. ಡಿಆರ್‌ಡಿ/ಸಮಾಪನೆ/ರದ್ಧತಿ/ಸಿಆರ್/152/2013–2014, ದಿನಾಂಕ: 31–03–2014**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ/ಸಿಓ/139/ಸಿಎಲ್‌ಎಂ/2010, ಬೆಂಗಳೂರು, ದಿನಾಂಕ: 17–02–2011ರ ಪ್ರಕಾರ ದತ್ತವಾದ ಅಧಿಕಾರದನ್ವಯ ಜಿ. ಓಬನಾಯಕ, ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ನಾಗಸಮುದ್ರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಈ ಸಂಘದ ನೋಂದಣಿ ಸಂಖ್ಯೆ/ಸನಿ30/09/ಆರ್‌ಜಿಎನ್/36271/2006–2007, ದಿನಾಂಕ: 19–01–2007ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದು ಪಡಿಸಿರುತ್ತೇನೆ. ಈ ದಿನದಿಂದ ಸಂಘವು ಅಸ್ತಿತ್ವವನ್ನು ಕಳೆದುಕೊಂಡಿರುತ್ತದೆ. ಸಮಾಪನಾಧಿಕಾರಿಗಳು ಸಂಘದ ಎಲ್ಲಾ ದಾಖಲೆಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರಿಗೆ ಒಪ್ಪಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 31–03–2014ರಂದು ನೀಡಿರುತ್ತೇನೆ.

ಸಹಿ/–

**P.R. 271** **ಸಹಕಾರ ಸಂಘಗಳ ಉಪ ನಿಬಂಧಕರು,**
**SC - 10** **ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

## ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ನಂ. 1, ಆಲಿ ಆಸ್ಕರ್ ರಸ್ತೆ, ಬೆಂಗಳೂರು–52 ಇವರ ನ್ಯಾಯಾಲಯದಲ್ಲಿ

**ಮೇಲ್ಮನವಿ ಸಂಖ್ಯೆ: ಆರ್‌ಸಿಎಸ್/ಡಿಎಪಿ/ಡಿ1/ಸೌ/01/2014–15**

| ವಾದಿ | ಪ್ರತಿವಾದಿಗಳು |
|---|---|
| The Nikhara Souhardha Credit Co-operative Ltd., No. 27, 10th Main, Near Srinagara Bus Terminus, Banashankari 1st Stage, Bangalore-50 Represented by its Recovery Manager | 1. M.V. Krishnaprasad S/o Late A.N. Varadaraju, No. 116, 1st Floor, 11th Cross, Malleshwaram., Bangalore-03<br>2. Smt. Kumari H.V. Godha W/o M.V. Krishnaprasad, No. 116, 1st Floor, 11th Cross, Malleswaram, Bangalore-03 |

**ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರಡಿ ಷರತ್ತಿಗೊಳಪಟ್ಟು ತೀರ್ಪುಪೂರ್ವ ಜಪ್ತಿ ಆದೇಶ**

ವಾದಿಯು ಸೌಹಾರ್ದ ಸಹಕಾರಿ ಕಾಯ್ದೆ 1997ರ ಕಲಂ 39ರಡಿ ದಾವೆ ದಾಖಲಿಸಿ ಪ್ರತಿವಾದಿಗಳಿಂದ ವಾದಿಗೆ ದಿನಾಂಕ: 24–03–2014ಕ್ಕೆ ವಸೂಲಾಗಬೇಕಾಗಿರುವ ರೂ. 50,45,831.00ಗಳನ್ನು ಶೇ. 24ರ ಬಡ್ಡಿಯೊಂದಿಗೆ ವಸೂಲಿ ಮಾಡಲು ಡಿಕ್ರಿ ನೀಡಲು ಕೋರಿರುತ್ತಾರೆ. ಸೌಹಾರ್ದ ಕಾಯ್ದೆ 1997ರ ಕಲಂ 44ರಡಿ ಅರ್ಜಿ ಸಲ್ಲಿಸಿ ಪ್ರತಿವಾದಿಗಳ ಷೆಡ್ಯೂಲ್ ಸ್ವತ್ತನ್ನು ತೀರ್ಪು ಪೂರ್ವ ಜಪ್ತಿಗೊಳಪಡಿಸಿ ಆದೇಶ ಹೊರಡಿಸಲು ಕೋರಿರುತ್ತಾರೆ. ವಾದಿ ಪರ ಶ್ರೀ ಹೆಚ್.ಎಸ್. ಶೇಷಾದ್ರಿ, ವಕೀಲರು ವಕಾಲತ್ತು ಸಲ್ಲಿಸಿರುತ್ತಾರೆ.

ವಾದಿ ಪರ ವಕೀಲರು ಹಾಜರಾಗಿ ಕಲಂ 44ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿರುವ ಅರ್ಜಿಯ ಬಗ್ಗೆ ವಾದ ಮಂಡಿಸಿರುತ್ತಾರೆ. ಅದನ್ನು ಆಲಿಸಲಾಗಿದೆ.

ವಾದಿಯ ದಾವಾ ಅರ್ಜಿ, ಕಲಂ 44 ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿ ಸಲ್ಲಿಸಿರುವ ಅರ್ಜಿ, ಅವರ ಪರ ವಕೀಲರು ಮಂಡಿಸಿರುವ ವಾದದಲ್ಲಿ, ಪ್ರತಿವಾದಿಗಳು ವಾದಿ ಸಂಸ್ಥೆಯ ಸದಸ್ಯರಾಗಿದ್ದು, ವ್ಯಾಪಾರದ ಉದ್ದೇಶಕ್ಕಾಗಿ ವಾದಿ ಸಂಸ್ಥೆಗೆ ಸಾಲಕ್ಕಾಗಿ ಅರ್ಜಿ ಸಲ್ಲಿಸಿದ್ದು, ದಿನಾಂಕ: 17–11–2008ರಂದು ರೂ. 32.50 ಲಕ್ಷ ಸಾಲ ಪಡೆದಿದ್ದು, ಈ ಸಾಲಕ್ಕೆ ಷೆಡ್ಯೂಲ್ ಸ್ವತ್ತನ್ನು ಡಿಟಿಡಿ ಮೂಲಕ ಆಧಾರ ಮಾಡಿರುತ್ತಾರೆಂದು ಹೇಳಿರುತ್ತಾರೆ. ಪ್ರತಿವಾದಿಗಳು ಸಾಲ ತೀರುವಳಿ ಮಾಡದೇ ಸುಸ್ತಿದಾರರಾಗಿದ್ದು, ಸಾಲ ವಸೂಲಾತಿಗಾಗಿ ದಾವೆ ಹೂಡಲಾಗಿದೆಯೆಂದು, ಷೆಡ್ಯೂಲ್ ಸ್ವತ್ತನ್ನು ಪ್ರತಿವಾದಿಗಳು ಪರಭಾರೆ ಮಾಡುವ/ವಿಲೇ ಮಾಡುವ ಉದ್ದೇಶ ಹೊಂದಿದ್ದು ಅದನ್ನು ವಿಲೇ ಮಾಡಿದಲ್ಲಿ ಈ ದಾವೆಯಲ್ಲಿ ಮುಂದೆ ಆದೇಶ ಹೊರಡಿಸಿದರೂ ಅದನ್ನು ಜಾರಿ ಮಾಡಿ ಹಣ ವಸೂಲಿ ಮಾಡಿಕೊಳ್ಳಲು ತೊಂದರೆಯಾಗುವುದರಿಂದ ಅದನ್ನು ವಿಲೇ ಮಾಡಲು ಸಾಧ್ಯವಾಗದಂತೆ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ವಾದಿಯ ದಾವಾ ಅರ್ಜಿ, ಕಲಂ 44ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಸಲ್ಲಿಸಿರುವ ಅರ್ಜಿ ಹಾಗೂ ಅರ್ಜಿಯೊಂದಿಗೆ ಸಲ್ಲಿಸಿರುವ ದಾಖಲೆಗಳು ಹಾಗೂ ಅವರ ಪರ ವಕೀಲರ ವಾದ ಇವುಗಳನ್ನು ಪರಿಶೀಲಿಸಿದೆ. ಷೆಡ್ಯೂಲ್ಡ್ ಸ್ವತ್ತನ್ನು ಪ್ರತಿವಾದಿಗಳು ವಿಲೇ ಮಾಡಿದಲ್ಲಿ ಪ್ರತಿವಾದಿಯ ವಿರುದ್ಧ ದಾವೆಯಲ್ಲಿ ಡಿಕ್ರಿ ನೀಡಿದರೂ ಅದನ್ನು ಜಾರಿ ಮಾಡಲು ಸಾಧ್ಯವಿಲ್ಲದಂತಾಗುವುದೆಂಬ ವಾದಿಯ ಕೋರಿಕೆ ಪರಿಗಣಿಸಿ, ಅರ್ಜಿದಾರರ ಅರ್ಜಿ ಪುರಸ್ಕರಿಸಿ ಈ ಕೆಳಕಂಡ ಷೆಡ್ಯೂಲ್ ಸ್ವತ್ತನ್ನು ತೀರ್ಪು ಪೂರ್ವ ಜಪ್ತಿ ಮಾಡಿ ಆದೇಶಿಸಿದೆ.

ಪ್ರತಿವಾದಿಯು ಈ ಆದೇಶವನ್ನು ತೆರವುಗೊಳಿಸಲು ಇಚ್ಛಿಸಿದಲ್ಲಿ ರೂ. 50.45 ಲಕ್ಷಗಳನ್ನು ವಾದಿ ಸಂಸ್ಥೆಯಲ್ಲಿ ಭದ್ರತೆಗಾಗಿ ಠೇವಣಿ ಮಾಡಿ, ಠೇವಣಿ ಮಾಡಿದ ದಾಖಲೆಯನ್ನು ಈ ನೋಟೀಸು ಪಡೆದ 30 ದಿವಸಗಳೊಳಗಾಗಿ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಈ ಆದೇಶವನ್ನು ಸ್ಥಿರೀಕರಿಸಲಾಗುವುದೆಂದು ತಿಳಿಯುವುದು.

**ಷೆಡ್ಯೂಲ್ ಸ್ವತ್ತು :–**

ಎರಡನೇ ಪ್ರತಿವಾದಿಯ ಹೆಸರಿನಲ್ಲಿರುವ ಬೆಂಗಳೂರು ಮಹಾನಗರ ಪಾಲಿಕೆ, ಮಲ್ಲೇಶ್ವರಮ 7ನೇ ವಾರ್ಡ್, 11ನೇ ಕ್ರಾಸ್‌ನಲ್ಲಿರುವ ಸ್ವತ್ತಿನ ಸಂಖ್ಯೆ: 116/21ರಲ್ಲಿ ಪೂರ್ವ ಪಶ್ಚಿಮ 35 ಅಡಿ ಹಾಗೂ ಉತ್ತರ, ದಕ್ಷಿಣ 55 ಅಡಿ ಅಳತೆಯ ಸ್ವತ್ತು ಇದಕ್ಕೆ ಚಕ್ಕುಬಂದಿ.

| | | |
|---|---|---|
| ಪೂರ್ವ | : | ಸ್ವತ್ತಿನ ಸಂಖ್ಯೆ: 116/3 ಶ್ರೀಮತಿ ಕೌಸಲ್ಯರವರ ಸ್ವತ್ತು |
| ಪಶ್ಚಿಮ | : | ಸ್ವತ್ತಿನ ಸಂಖ್ಯೆ: 116/2 ರಲ್ಲಿ ಉಳಿದ ಸ್ವತ್ತು |
| ಉತ್ತರ | : | ಸ್ವತ್ತಿನ ಸಂಖ್ಯೆ: 116/2 ರಲ್ಲಿ ಉಳಿದಿರುವ ಸ್ವತ್ತು |
| ದಕ್ಷಿಣ | : | 11ನೇ ಕ್ರಾಸ್ ರಸ್ತೆ |

ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಈ ದಿನ, ದಿನಾಂಕ: 25–04–2014ರಂದು ನನ್ನ ರುಜು ಹಾಗೂ ಕಛೇರಿಯ ಮೊಹರಿನೊಂದಿಗೆ ನೀಡಲಾಗಿದೆ.

**P.R. 272** **ಸಹಕಾರ ಸಂಘಗಳ ನಿಬಂಧಕರು**
**SC - 5** **ಕರ್ನಾಟಕ ರಾಜ್ಯ, ಬೆಂಗಳೂರು–18**

## ಸಹಕಾರ ಸಂಘಗಳ ಅಪರ ನಿಬಂಧಕರು (ವಸತಿ ಮತ್ತು ಇತರೆ) ಇವರ ನ್ಯಾಯಾಲಯದಲ್ಲಿ, ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ. 1, ಆಲಿ ಆಸ್ಕರ್ ರಸ್ತೆ, ಬೆಂಗಳೂರು–52

**ದಾವಾ ಸಂಖ್ಯೆ: ಅನಿ/(ವ&ಇ) ಡಿ2/ಡಿಐಎಸ್/ಎಂಡಿ/01/2014–15**

| ವಾದಿ | ಪ್ರತಿವಾದಿಗಳು |
|---|---|
| ಕಾರ್ಯದರ್ಶಿಯವರು,<br>ಕರ್ನಾಟಕ ಪೋಸ್ಟಲ್ ಮತ್ತು ಟೆಲಿಕಾಂ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ.,<br>ನಂ. 07, ಸಂದೇಶ್ ಭವನ್, 3ನೇ ಮುಖ್ಯರಸ್ತೆ,<br>ಪೋಸ್ಟಲ್ ಕಾಲೋನಿ, ಸಂಜಯನಗರ,<br>ಬೆಂಗಳೂರು–94 | 1. ಹೆಚ್.ಕೆ. ಗೋಪಾಲಕೃಷ್ಣ ಬಿನ್ ಲೇಟ್: ಕೇಶವಮೂರ್ತಿ<br>ನಂ. 91, 1ನೇ ಹಂತ, 5ನೇ ಮೈನ್, ಪೋಸ್ಟಲ್ ಕಾಲೋನಿ,<br>ಸಂಜಯನಗರ, ಬೆಂಗಳೂರು–94<br>2. ಎಂ.ಜಿ. ರಂಗದಾಮಯ್ಯ, ಮಾಲೀಕರು<br>ಶ್ರೀ ಮೂಕಾಂಬಿಕಾ ಎಂಟರ್‌ಪ್ರೈಸಸ್, ಎಂ.ಜಿ. ರಸ್ತೆ,<br>ಸುಭಾಷ್ ನಗರ್, ನೆಲಮಂಗಲ ಟೌನ್ |

**ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರಡಿ ಷರತ್ತಿಗೊಳಪಟ್ಟ ತೀರ್ಪುಪೂರ್ವ ಜಪ್ತಿ ಆದೇಶ**

ವಾದಿಯು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರಡಿ ದಾವೆ ದಾಖಲಿಸಿ ಪ್ರತಿವಾದಿಗಳಿಂದ ವಾದಿಗೆ ಹಸ್ತಾಂತರಿಸಬೇಕಾಗಿರುವ 5 ಎಕರೆ 32 ಗುಂಟೆ ಜಮೀನನ್ನು ಭೂಪರಿವರ್ತನೆ ಮಾಡಿಸಿ ಪ್ರತಿವಾದಿಗಳು ವಾದಿಯೊಂದಿಗೆ ಮಾಡಿಕೊಂಡಿರುವ ಕರಾರಿನಂತೆ ಅದನ್ನು ವಾದಿಗೆ

ಹಸ್ತಾಂತರಿಸಲು ಹಾಗೂ ಈ ಬಗ್ಗೆ ಜಮೀನು ವರ್ಗಾವಣೆ ಸಂಬಂಧ ತೆಗೆದುಕೊಳ್ಳಬೇಕಾದ ಎಲ್ಲಾ ಅಗತ್ಯ ಕ್ರಮ ತೆಗೆದುಕೊಳ್ಳಲು ಪ್ರತಿವಾದಿಗಳಿಗೆ ನಿರ್ದೇಶನ ನೀಡಲು ಕೋರಿರುತ್ತಾರೆ. ಕಲಂ 103(1)ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿ ಪ್ರಮಾಣ ಪತ್ರದೊಂದಿಗೆ ಅರ್ಜಿ ಸಲ್ಲಿಸಿರುತ್ತಾರೆ.

ವಾದಿಯ ದಾವಾ ಅರ್ಜಿ, ಕಲಂ 103(1)ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿ ಸಲ್ಲಿಸಿರುವ ಅರ್ಜಿಯಲ್ಲಿ 1ನೇ ಪ್ರತಿವಾದಿ ವಾದಿ ಸಂಸ್ಥೆಯಲ್ಲಿ ಹಿಂದೆ ಕಾರ್ಯನಿರ್ವಾಹಕ ನಿರ್ದೇಶಕರಾಗಿದ್ದರೆಂದು 2ನೇ ಪ್ರತಿವಾದಿಯು ವಾದಿ ಸಂಸ್ಥೆಯ ಬಡಾವಣೆ ನಿರ್ಮಿಸಲು ನೇಮಕ ಮಾಡಿಕೊಂಡಿರುವ ಅಭಿವೃದ್ಧಿದಾರರೆಂದು ಹೇಳಿರುತ್ತಾರೆ. ವಾದಿ ಸಂಸ್ಥೆಯು ಒಂದು ಗೃಹನಿರ್ಮಾಣ ಸಹಕಾರ ಸಂಸ್ಥೆ ಆಗಿದ್ದು, ನೇರವಾಗಿ ಭೂಮಾಲೀಕರಿಂದ ಕೃಷಿ ಜಮೀನನ್ನು ಬಡಾವಣೆ ನಿರ್ಮಿಸಲು ಖರೀದಿಸಲು ಅವಕಾಶವಿಲ್ಲದ ಕಾರಣ 1ನೇ ಪ್ರತಿವಾದಿಯು ವಾದಿ ಸಂಸ್ಥೆಯ ನಿರ್ದೇಶಕರಾಗಿದ್ದ ಕಾರಣ ಅವರ ಹೆಸರಿಗೆ ಜಮೀನು ಖರೀದಿಸಿದ್ದು, ಇದಕ್ಕೆ ವಾದಿ ಸಂಸ್ಥೆಯ ಹಣ ಉಪಯೋಗಿಸಲಾಗಿತ್ತೆಂದು ಇದನ್ನು 1ನೇ ಪ್ರತಿವಾದಿಯು ಭೂಪರಿವರ್ತನೆ ಮಾಡಿಸಿ ನಂತರ 2ನೇ ಪ್ರತಿವಾದಿ ಬಡಾವಣೆ ನಿರ್ಮಾಣಕ್ಕಾಗಿ ಹಸ್ತಾಂತರಿಸಬೇಕಾಗಿತ್ತೆಂದು ಹೇಳಿರುತ್ತಾರೆ. ವಾದಿ ಸಂಸ್ಥೆಯ ಖರ್ಚಿನಲ್ಲಿ 1ನೇ ಪ್ರತಿವಾದಿಯ ಹೆಸರಿನಲ್ಲಿ ವಾದಿ ಸಂಸ್ಥೆಯು ಖರೀದಿಸಿದ್ದ ಈ ಕೆಳಕಂಡ ಷೆಡ್ಯೂಲ್ ಸ್ವತ್ತನ್ನು 1ನೇ ಪ್ರತಿವಾದಿಯು ತನ್ನನ್ನು ಸಂಘದ ನಿರ್ದೇಶಕ ಸ್ಥಾನದಿಂದ ಅನರ್ಹತೆಗೊಳಿಸಿ ತೆಗೆದುಹಾಕಿದ ಕಾರಣದಿಂದ 1ನೇ ಪ್ರತಿವಾದಿಯು ಸದರಿ ಸ್ವತ್ತನ್ನು ಭೂಪರಿವರ್ತನೆ ಮಾಡಿಸಿ ವಾದಿಗೆ ಹಸ್ತಾಂತರಿಸದೇ ಇದ್ದು ಈಗ ಅದನ್ನು ಪರಭಾರೆ ಮಾಡುವ ಉದ್ದೇಶ ಹೊಂದಿದ್ದಾರೆಂದು ಹೇಳಿರುತ್ತಾರೆ. 1ನೇ ಪ್ರತಿವಾದಿಯು ಈಗಾಗಲೇ ವಾದಿಯ ಇನ್ನೊಂದು ಸ್ವತ್ತನ್ನು ಪ್ರಸ್ತುತ ಅವರು ವಾದಿ ಸಂಸ್ಥೆಯಲ್ಲಿ ಕಾರ್ಯನಿರ್ವಾಹಕ ನಿರ್ದೇಶಕರಾಗಿ ಇಲ್ಲದೇ ಇದ್ದರೂ ಪರಭಾರೆ ಮಾಡಿದ್ದು, ಈ ಬಗ್ಗೆ ಅವರ ವಿರುದ್ಧ ಮೊಕದ್ದಮೆ ಹೂಡಲು ವಾದಿ ಸಂಸ್ಥೆಯು ಕ್ರಮವಿಟ್ಟಿರುವುದಾಗಿ ಹೇಳಿರುತ್ತಾರೆ. 1ನೇ ಪ್ರತಿವಾದಿ ಈಗ ಕೆಳಕಂಡ ಷೆಡ್ಯೂಲ್ ಸ್ವತ್ತನ್ನು ವಿಲೇವಾರಿ ಮಾಡಿದಲ್ಲಿ ಈ ದಾವೆಯಲ್ಲಿ ಮುಂದೆ ಡಿಕ್ರಿ ನೀಡಿದರೂ ನಿರರ್ಥಕವಾಗುವುದೆಂದು ಹೇಳಿ ಅದನ್ನು 1ನೇ ಪ್ರತಿವಾದಿ ಪರಭಾರೆ ಮಾಡಲು ಸಾಧ್ಯವಾಗದಂತೆ ತೀರ್ಪುಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿರುತ್ತಾರೆ.

ವಾದಿಯ ದಾವಾ ಅರ್ಜಿ, ಕಲಂ 103(1)ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಸಲ್ಲಿಸಿರುವ ಅರ್ಜಿ ಹಾಗೂ ಅರ್ಜಿಯೊಂದಿಗೆ ಸಲ್ಲಿಸಿರುವ ದಾಖಲೆಗಳನ್ನು ಪರಿಶೀಲಿಸಿದೆ. ಷೆಡ್ಯೂಲ್ಡ್ ಸ್ವತ್ತನ್ನು 1ನೇ ಪ್ರತಿವಾದಿ ವಿಲೇ ಮಾಡಿದಲ್ಲಿ ಪ್ರತಿವಾದಿಗಳ ವಿರುದ್ಧ ದಾವೆಯಲ್ಲಿ ಡಿಕ್ರಿ ನೀಡಿದರೂ ಅದನ್ನು ಜಾರಿ ಮಾಡಲು ಸಾಧ್ಯವಿಲ್ಲದಂತಾಗುವುದೆಂಬ ವಾದಿಯ ಕೋರಿಕೆ ಪುರಸ್ಕರಿಸಲು ಯೋಗ್ಯವೆಂದು ಪರಿಗಣಿಸಿ, ಅರ್ಜಿದಾರರ ಅರ್ಜಿ ಪುರಸ್ಕರಿಸಿ ಈ ಕೆಳಕಂಡ ಷೆಡ್ಯೂಲ್ ಸ್ವತ್ತನ್ನು ತೀರ್ಪು ಪೂರ್ವ ಜಪ್ತಿ ಮಾಡಿ ಆದೇಶಿಸಿದೆ.

ಪ್ರತಿವಾದಿಯು ಈ ಆದೇಶವನ್ನು ತೆರವುಗೊಳಿಸಲು ಇಚ್ಛಿಸಿದಲ್ಲಿ ರೂ. 6 ಕೋಟಿ 38 ಲಕ್ಷ 33 ಸಾವಿರ ರೂ.ಗಳನ್ನು ವಾದಿ ಸಂಸ್ಥೆಯಲ್ಲಿ ಭದ್ರತೆಗಾಗಿ ಠೇವಣಿ ಮಾಡಿ, ಠೇವಣಿ ಮಾಡಿದ ದಾಖಲೆಯನ್ನು ಈ ನೋಟೀಸು ಪಡೆದ 30 ದಿವಸಗಳೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಈ ಆದೇಶವನ್ನು ಸ್ಥಿರೀಕರಿಸಲಾಗುವುದೆಂದು ತಿಳಿಯುವುದು.

**ಷೆಡ್ಯೂಲ್ ಸ್ವತ್ತು :**

ಒಂದನೇ ಪ್ರತಿವಾದಿಯ ಹೆಸರಿನಲ್ಲಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ ತಾಲ್ಲೂಕು ಕೆ.ಜಿ. ಶ್ರೀನಿವಾಸಪುರ ಹಾಗೂ ಬೆತ್ತನಗೆರೆ ಗ್ರಾಮಗಳಲ್ಲಿನ ಈ ಕೆಳಕಂಡ ಕೃಷಿ ಜಮೀನು ಹಾಗೂ ಅದಕ್ಕೆ ಚೆಕ್ಕುಬಂದಿ ಈ ಕೆಳಕಂಡಂತಿದೆ.

| ಕ್ರ.ಸಂ. | ಗ್ರಾಮದ ಹೆಸರು | ಸ್ವತ್ತಿನ ಸರ್ವೇ ನಂ. | ಸ್ವತ್ತಿನ ವಿಸ್ತೀರ್ಣ ಎ. ಗು. | ಚೆಕ್ಕುಬಂದಿ | | | |
|---|---|---|---|---|---|---|---|
| | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1. | ಕೆ.ಜಿ. ಶ್ರೀನಿವಾಸಪುರ | 19 | 1.20 | ಮೂರ್ತಿ | ರಸ್ತೆ | ರಾಜಪ್ಪ | ಕೆರೆ ಅಂಗಳ |
| 2. | ಕೆ.ಜಿ. ಶ್ರೀನಿವಾಸಪುರ | ಹಳೆ 1/3<br>ಹೊಸ 1/5 | 0.12 | ದೇವಸ್ಥಾನ | ಸಿದ್ದಗಂಗಪ್ಪ | ಗಂಗಣ್ಣ | ಬಸವರಾಜಪ್ಪ |
| 3. | ಕೆ.ಜಿ. ಶ್ರೀನಿವಾಸಪುರ | 1/2<br>ಹಾಗೂ 2/3 | 0.38<br>0.28 | ಚಾಮರಾಜ<br>ಗಂಗಪ್ಪ | ಕಾಲೋನಿ<br>ಸಿದ್ದಪ್ಪ | ಸಿದ್ದಪ್ಪ<br>ಸಿದ್ದಪ್ಪ | ಗ್ರಾಮ ಸರಹದ್ದು<br>ಗಂಗಣ್ಣ |
| 4. | ಕೆ.ಜಿ. ಶ್ರೀನಿವಾಸಪುರ | 6/1 | 0.29.8<br>0.09 | ನೀರಿನ<br>ಕಾಲುವೆ | ಅಕ್ಕಮ್ಮ | ಪ್ರಭಾಕರ ರೆಡ್ಡಿ | ಸಿದ್ದಗಂಗಪ್ಪ |
| 5. | ಕೆ.ಜಿ. ಶ್ರೀನಿವಾಸಪುರ | 2/2 | 0.24 | ರಸ್ತೆ | ಇದೇ ಸರ್ವೆ ನಂ.<br>ಉಳಿದ ಜಮೀನು | 1ನೇ ಪ್ರತಿವಾದಿಯ<br>ಜಮೀನು | 1ನೇ ಪ್ರತಿವಾದಿಯ<br>ಜಮೀನು |
| 6. | ಬೆತ್ತನಗೆರೆ | 36/2ಎ,<br>36/2ಬಿ | 0.10<br>0.06 | ಮುನಿಶಾಮಿ | ಲಕ್ಕಮ್ಮ | ಹಳ್ಳ | ರಾಜಣ್ಣ |
| 7. | ಬೆತ್ತನಗೆರೆ | 4/2 | 1.21 | ಗೋವಿಂದಯ್ಯ | ಸರೋವರ ರಸ್ತೆ | ಈರಲಿಂಗಯ್ಯ | ಕಾಲುವೆ |

1ನೇ ಪ್ರತಿವಾದಿಗೆ ಸೇರಿದ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಸೇರಿದ ಸಂಜಯನಗರ 19ನೇ ವಾರ್ಡಿಗೆ ಸೇರಿದ ಬೆಂಗಳೂರು ಉತ್ತರ ತಾಲ್ಲೂಕು ಗೆದ್ದಲಹಳ್ಳಿ ಗ್ರಾಮದ ನಿವೇಶನ ಸಂಖ್ಯೆ 91 ಪೂರ್ವ ಪಶ್ಚಿಮ 50 ಅಡಿ ಉತ್ತರ ದಕ್ಷಿಣ 30 ಅಡಿ ಅಳತೆಯ ನಿವೇಶನ ಹಾಗೂ ಇದರಲ್ಲಿನ ಪೂರ ಸ್ವತ್ತಿಗೆ ಚಕ್ಕುಬಂದಿ :–

ಪೂರ್ವಕ್ಕೆ : ನಿವೇಶನ ಸಂಖ್ಯೆ 92
ಪಶ್ಚಿಮಕ್ಕೆ : ನಿವೇಶನ ಸಂಖ್ಯೆ 90
ಉತ್ತರಕ್ಕೆ : ನಿವೇಶನ ಸಂಖ್ಯೆ 104
ದಕ್ಷಿಣಕ್ಕೆ : ರಸ್ತೆ

ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಈ ದಿನ, ದಿನಾಂಕ: 29–04–2014ರಂದು ನನ್ನ ರುಜು ಹಾಗೂ ಕಛೇರಿಯ ಮೊಹರಿನೊಂದಿಗೆ ನೀಡಲಾಗಿದೆ.

**P.R. 273** **ಸಹಕಾರ ಸಂಘಗಳ ಅಪರ ನಿಬಂಧಕರು**
**SC - 5** **(ವಸತಿ ಮತ್ತು ಇತರೆ)**

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 101 ಎಲ್‌ಆರ್‌ಎಂ 2012, ಬೆಂಗಳೂರು, ದಿನಾಂಕ: 29–04–2014**

**ಮೆ॥ ಜಕಿನಿ ಬಯೋಟೆಕ್ ಪ್ರೈ ಲಿ., ಬೆಂಗಳೂರು** ಇವರಿಗೆ ಚಾಮರಾಜನಗರ ತಾಲ್ಲೂಕು, ಸಂತೆಮರಹಳ್ಳಿ ಹೋಬಳಿ, ತಿಮ್ಮೇಗೌಡನ ಪಾಳ್ಯ, ಬೆಟ್ಟಹಳ್ಳಿ ಮತ್ತು ಹೊಸಪುರ ಗ್ರಾಮಗಳ ವಿವಿಧ ಸರ್ವೆ ನಂಬರ್‌ಗಳಲ್ಲಿ ಒಟ್ಟು 160.14 ಎಕರೆ ಕೃಷಿ ಜಮೀನನ್ನು ಆಹಾರ ಸಂಸ್ಕರಣ ಘಟಕ ಸ್ಥಾಪಿಸುವ ಉದ್ದೇಶಕ್ಕಾಗಿ ಖರೀದಿಸಲು ಅನುಮತಿ ನೀಡುವಂತೆ ಶಿಫಾರಸ್ಸು ಮಾಡಿ, ಜಿಲ್ಲಾಧಿಕಾರಿ, ಚಾಮರಾಜನಗರ ಇವರು ಪ್ರಸ್ತಾವನೆ ಸಂಖ್ಯೆ: ಎಲ್‌ಆರ್‌ಎಫ್/ಸಿಆರ್/06/2012–13, ದಿನಾಂಕ 26–10–2012ರಲ್ಲಿ ಕೋರಲಾಗಿತ್ತು. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರ ಕಲಂ 109(1) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು 1974ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿರುವುದರಿಂದ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ, ಕಲಂ 109ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ:–

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ಈ ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3) ಈ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.

4) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ 1961ರ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳು/ಕಾಯ್ದೆಗಳು ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

5) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

6) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

7) ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಂ. ದಾಕ್ಷಾಯಣಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ).

**P.R. 280**
**SC - 20**

## IN THE COURT OF XI th ADDL.CHIEF METROPOLITAN MAGISTRATE BANGALORE CITY

It is here by notified to the public that the Devarajeevana halli police station, Bangalore city have seized the following vehicles as unclaimed and such vehicles are lying in the Police station as unclaimed so far. Hence the owners of the vehicles may put their claim one month from the date of this publication.

Bangalore City **XI th Addl.Chief Metropolitan Magistrate Court**
Date: 15-05-2014 **Mayohall,Bangalore**

